Vol - 12 September 2013 Issue No. 09 ₹ 10/-





# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾಪತ್ರಿಕೆ

# Karnataka Scout & Guide

*News Magazine*



**Sri Pranab Mukherjee, His Excellency the President of India presented the Rashtrapati Scout and Guide Certificates for the year 2012 to Scout Mr. Sandesh R. Raikar and Guide Kum. N. Kadambari from Karnataka State on 9th September 2013 at Rashtrapati Bhavan, New Delhi.**



ಾಂಕ 26 ರಿಂದ 30 ಆಗಸ್ಟ್ 2013 ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್
ತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ ರಾಜ್ಯಮಟ್ಟದ
ೇವರ್ಸ್‌ಗಳ ಸಮುದಾಯ ಸೇವಾ ಶಿಬಿರದ ಸಮಾರೋಪ
ಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ
ತನಾಡುತ್ತಿರುವುದು. ಶ್ರೀ ವಿಶ್ವನಾಥ್ ಪಿ. ಮುದಜ್ಜಿ, ಮುಖ್ಯ
ೇಜನಾಧಿಕಾರಿ, ದಾವಣಗೆರೆ ಜಿಲ್ಲಾ ಪಂಚಾಯತ್, ಡಾ. ಸುಮಿತ್ರ,
್ಯಾಧಿಕಾರಿ, ಕೊಂಡಜ್ಜಿ, ಶ್ರೀ ರಂಗರಾಜು, ಸಹಾಯಕ ನಿರ್ದೇಶಕರು,
ರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ,
ಬಿ.ಕೆ. ಪಾಟೀಲ್ ಹಾಗೂ ಶ್ರೀ ಡಿ. ಬಸವರಾಜ್ ಚಿತ್ರದಲ್ಲಿದ್ದಾರೆ.



ದಿನಾಂಕ 28-08-2013 ರಂದು ಚಾಮರಾಜನಗರ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಏರ್ಪಡಿಸಿದ್ದ ಪ್ರೌಢಶಾಲಾ ಮುಖ್ಯೋಪಾಧ್ಯಾಯರುಗಳ ಪರಿಚಯಾತ್ಮಕ ಶಿಬಿರದ ಉದ್ಘಾಟನೆಯನ್ನು ಶ್ರೀ ಮಂಜುನಾಥ್, ಶಿಕ್ಷಣಾಧಿಕಾರಿಗಳು ನೆರವೇರಿಸಿದರು. ಶ್ರೀ ಅಂದಾನಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಚಾಮರಾಜನಗರ, ಶ್ರೀ ಬಿ.ಆರ್. ಅಶ್ವತ್ಥನಾರಾಯಣ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಮಲ್ಲಿಕಾರ್ಜುನ ಸ್ವಾಮಿ, ಶ್ರೀಮತಿ ಬರ್ನಡೆಟ ಲೆವಿಸ್ ಜಿಲ್ಲಾ ಆಯುಕ್ತರುಗಳು ಹಾಗೂ ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತೆ ಚಿತ್ರದಲ್ಲಿದ್ದಾರೆ.



ದಿನಾಂಕ 01ರಿಂದ 07 ಸೆಪ್ಟೆಂಬರ್ 2013ರವರೆಗೆ ಡಾ. ಅನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ನಡೆದ ಸ್ಕೌಟ್ ಮಾಸ್ಟರ್ಸ್‌ಗಳ ರಾಜ್ಯ ಮಟ್ಟದ ಮುಂದುವರೆದ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಹಾಗೂ ಸಿಬ್ಬಂದಿ ವರ್ಗ.



ದಿನಾಂಕ 03ರಿಂದ 07 ಸೆಪ್ಟೆಂಬರ್ 2013ರವರೆಗೆ ಡಾ. ಅನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ನಡೆದ ರಾಜ್ಯ ಮಟ್ಟದ ಪಯೋನರಿಂಗ್ ಹಾಗೂ ಎಸ್ಟಿಮೇಶನ್ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಹಾಗೂ ಸಿಬ್ಬಂದಿ ವರ್ಗ.



ದಿನಾಂಕ 24.08.2013ರಂದು ವನಿತಾ ಉತ್ಕರ್ಷ ಮಹಿಳಾ ಮಂಡಳಿ ವಿಜಾಪೂರದಲ್ಲಿ ಜರುಗಿದ ಸಂವಾದ ಕಾರ್ಯಕ್ರಮದಲ್ಲಿ ಶ್ರೀ ವಿಶ್ವೇಶ್ವರತೀರ್ಥ ಪೇಜಾವರ ಸ್ವಾಮೀಜಿ ಅವರ ಜೊತೆ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳನ್ನು ಕಾಣಬಹುದು.



ದಿನಾಂಕ 04.09.2013ರಂದು ಚಿಕ್ಕಮಗಳೂರು ಜಿಲ್ಲಾ ಸ್ಕೌಟ್ ಭವನದಲ್ಲಿ ನಡೆದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದಲ್ಲಿ ಶ್ರೀ ರಾಜೇಗೌಡ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಎಂ.ಎನ್. ಷಡಕ್ಷರಿ ಜಿಲ್ಲಾ ಮುಖ್ಯ ಆಯುಕ್ತ, ಶ್ರೀ ಶಶಿಧರ ಜಿಲ್ಲಾ ಕಾರ್ಯದರ್ಶಿ, ಶ್ರೀ ಎಲ್.ಟಿ. ಲೋಕೇಶ್ ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತ (ಸ್ಕೌಟ್ಸ್), ಶ್ರೀಮತಿ ಸಂಧ್ಯಾರಾಣಿ ಡಿಟಿಸಿ(ಗೈಡ್ಸ್) ಚಿತ್ರದಲ್ಲಿದ್ದಾರೆ.









ದಿನಾಂಕ 07.09.2013ರಂದು ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್ ಖಜಾನೆ ಶಾಖೆ ರಾಯಚೂರು ವತಿಯಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ರಾಯಚೂರು ಇವರಿಗೆ 16 ಸಾವಿರ ಬೆಲೆಯ ಬ್ಯಾಂಡ್‌ಸೆಟ್ ಮತ್ತು ಬ್ಯಾಂಡ್ ಸಮವಸ್ತ್ರವನ್ನು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳಿಗೆ 64 ಜೊತೆ ಸಮವಸ್ತ್ರಗಳನ್ನು ಶ್ರೀ ಪಿ.ಗಣೇಶ ಪೈ. ಬೆಂಗಳೂರು ನೆಟ್‌ವರ್ಕ್‌ನ ಪ್ರಧಾನ ವ್ಯವಸ್ಥಾಪಕರು ವಿತರಿಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಸ್. ಗೋವಿಂದರಾಜು ಹಾಗೂ ಕಾರ್ಯದರ್ಶಿಗಳಾದ ಆರ್.ಹೆಚ್.ಸಾಗರ್ ಮತ್ತು ಬ್ಯಾಂಕಿನ ಹಿರಿಯ ಅಧಿಕಾರಿಗಳು ಚಿತ್ರದಲ್ಲಿದ್ದಾರೆ.

# ರಾಜ್ಯ ಮುಖ್ಯ ಆಯುಕ್ತರ ನುಡಿ.........................

ಮಾನ್ಯರೇ,

ಶತಮಾನೋತ್ಸವ ಆಚರಿಸಿ-ಎರಡನೇ ಶತಮಾನಕ್ಕೆ ಕಾಲಿಟ್ಟಿರುವ ಪ್ರಪಂಚದಲ್ಲಿರುವ ಏಕೈಕ ಸಮವಸ್ತ್ರದಾರಿ ಯುವ ಚಳವಳಿ "ಸ್ಕೌಟ್-ಗೈಡ್" ಚಳವಳಿ. 1917 ರಲ್ಲಿ ಹಿಂದಿನ ಮೈಸೂರು ಸಂಸ್ಥಾನದ ಅಧಿಪತಿಯಾಗಿದ್ದ ಮಹಾರಾಜರಾದ ಶ್ರೀ ಕೃಷ್ಣರಾಜ ಒಡೆಯರ್ ಅವರ ಪೋಷಕತ್ವದಲ್ಲಿ ಸ್ಥಾಪಿತವಾದ ಚಳವಳಿಗೆ ಆಗಿದ್ದ ನಾಮಧೇಯ "ದಿ ಬಾಯ್ ಸ್ಕೌಟ್ಸ್ ಆಫ್ ಮೈಸೂರು" ಎಂದು. ಅವರ ಸಹೋದರ ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು ಚಳವಳಿಯ ರಾಜ್ಯ ಮುಖ್ಯಸ್ಥರಾಗಿದ್ದರು. ಅಂದು ಅವರು ಹೊರಡಿಸಿದ ಸರ್ಕಾರದ ರಾಜಾಜ್ಞೆ, ದಿನಾಂಕ 3 ಅಕ್ಟೋಬರ್ 2017 ರಂತೆ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ ಚಳವಳಿಯ ಚಟುವಟಿಕೆಗಳನ್ನು ಪ್ರಾರಂಭಿಸಬೇಕೆಂದು ಸೂಚಿಸಲಾಗಿತ್ತು.

ದಿನಾಂಕ 29 ಸೆಪ್ಟಂಬರ್ 2013 ರ ಭಾನುವಾರ ಬೆಳಿಗ್ಗೆ ರಾಜ್ಯ ಸಂಸ್ಥೆಯ 95ನೆಯ ರಾಜ್ಯ ಪರಿಷತ್ ವಾರ್ಷಿಕ ಸಭೆ ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಏರ್ಪಡಿಸಿದ್ದು ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಪ್ರತಿನಿಧಿಗಳು ಹಾಗು ಪದಾಧಿಕಾರಿಗಳು ಭಾಗವಹಿಸಲಿದ್ದಾರೆ. ತಮಗೆಲ್ಲಾ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಸ್ವಾಗತ.

ದಿನಾಂಕ 9 ಸೆಪ್ಟೆಂಬರ್ 2013 ರಂದು ನವದೆಹಲಿಯ ರಾಷ್ಟ್ರಪತಿ ಭವನದಲ್ಲಿ ಜರುಗಿದ "ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್‌ಗಳ ಪದಕ ಪುರಸ್ಕಾರ" ಸಮಾರಂಭದಲ್ಲಿ ರಾಜ್ಯದ 89 ಸ್ಕೌಟ್ಸ್‌ಗಳು ಹಾಗೂ 128 ಗೈಡ್ಸ್‌ಗಳು ರಾಷ್ಟ್ರದ ರಾಷ್ಟ್ರಾಧ್ಯಕ್ಷರಿಂದ ರಾಷ್ಟ್ರಪತಿ ಸ್ಕೌಟ್-ಗೈಡ್ ಪದಕಕ್ಕೆ ಅರ್ಹತೆ ಪಡೆದು ಪುರಸ್ಕೃತರಾಗಿರುವುದು ನಾವೆಲ್ಲರೂ ಹೆಮ್ಮೆ-ಅಭಿಮಾನ ಪಡುವ ವಿಷಯ ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಗಳ ಪರವಾಗಿ ಸ್ಕೌಟ್-ಗೈಡ್ ಚಳವಳಿಯ ಪ್ರತಿಷ್ಠಿತ ರಾಷ್ಟ್ರಪತಿ ಪದಕ ಪುರಸ್ಕಾರವನ್ನು ಗಳಿಸಿಕೊಂಡಿರುವ 217 ಅಭ್ಯರ್ಥಿಗಳಿಗೂ ಹಾಗು ಅವರುಗಳಿಗೆ ಸೂಕ್ತ ಸಲಹೆ- ಸೂಚನೆ- ಮಾರ್ಗದರ್ಶನ ಮಾಡಿದ ಅವರುಗಳ ಗುರುವೃಂದಕ್ಕೆ-ಅದಕ್ಕೆ ಪೂರಕವಾದ ಎಲ್ಲ ರೀತಿಯ ಪ್ರೋತ್ಸಾಹ ನೀಡಿದ ಪೋಷಕರುಗಳಿಗೆ ಸಂಬಂಧಪಟ್ಟ ವಿದ್ಯಾ ಸಂಸ್ಥೆಗಳ ಮುಖ್ಯಸ್ಥರುಗಳಿಗೆ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ, ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳಿಗೆ ರಾಜ್ಯ ಸಂಸ್ಥೆಯ ಹೃತ್ಪೂರ್ವಕ ಧನ್ಯವಾದಗಳು.

ಈ ಸಮಾರಂಭದಲ್ಲಿ ಕರ್ನಾಟಕದಿಂದ 7 ಸ್ಕೌಟ್ಸ್ ಹಾಗು ಸ್ಕೌಟರ್ ಮತ್ತು 8 ಗೈಡ್ಸ್ ಹಾಗು ಗೈಡರ್ ಭಾಗವಹಿಸಿ ರಾಜ್ಯ ಸಂಸ್ಥೆಯು ಪರವಾಗಿ ಬೆಂಗಳೂರು ಉತ್ತರ ಜಿಲ್ಲೆಯು ಗೈಡ್ ಕುಮಾರಿ ಎನ್. ಕಾದಂಬರಿ ಹಾಗೂ ದಾವಣಗೆರೆ ಜಿಲ್ಲೆಯ ಕುಮಾರ ಸಂದೇಶ್ ಆರ್. ರಾಯ್ಕರ್ ಅವರುಗಳು

ಗೌರವಾನ್ವಿತ ರಾಷ್ಟ್ರಪತಿಗಳಾದ ಶ್ರೀ ಪ್ರಣಬ್ ಮುಖರ್ಜಿ ಅವರಿಂದ ರಾಷ್ಟ್ರಪತಿ ಗೈಡ್-ಸ್ಕೌಟ್ ಪದಕ ಪುರಸ್ಕೃತರಾಗಿದ್ದಾರೆ. ರಾಜ್ಯದ ಪ್ರತಿಷ್ಠೆ-ಗೌರವಗಳನ್ನು ರಾಷ್ಟ್ರಮಟ್ಟದಲ್ಲಿ ಹೆಚ್ಚಿಸಿ ಶ್ರಮವಹಿಸಿದ ಸಂಬಂದಪಟ್ಟ ಜಿಲ್ಲೆಗಳ ದಳ-ಘಟಕಗಳ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಆಗಸ್ಟ್ 26 ರಿಂದ 30 ರ ವರೆವಿಗೆ ಕೊಂಡಜ್ಜಿಯಲ್ಲಿ ಜರುಗಿದ ರಾಜ್ಯದ ಹಿರಿಯ ಸ್ಕೌಟ್ಸ್-ರೋವರ್ಸ್‌ಗಳ ಸಮುದಾಯ ಸೇವಾ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ದಿನಾಂಕ 30 ಆಗಸ್ಟ್ ರಂದು ಭಾಗವಹಿಸಿ ಎಲ್ಲರಿಗೂ ಶುಭಕೋರಿದ್ದೇನೆ. ಸಮಾರಂಭದ ಮುಖ್ಯ ಅತಿಥಿಯಾಗಿ ದಾವಣಗೆರೆ ಜಿಲ್ಲಾ ಪಂಚಾಯತ್‌ನ ಮುಖ್ಯ ಯೋಜನಾಧಿಕಾರಿ ಶ್ರೀ ವಿಶ್ವನಾಥ್ ಪಿ. ಮುದಜ್ಜಿ ಮುಖ್ಯ ಅಥಿತಿಯಾಗಿ ಭಾಗವಹಿಸಿ, ತರಬೇತಿ ಶಿಬಿರದ ಅಭಿವೃದ್ಧಿ ಕಾರ್ಯಗಳಿಗೆ ಎಲ್ಲ ರೀತಿಯ ಸಹಾಯ ಸಹಕಾರ ನೀಡುವುದಾಗಿ ಭರವಸೆ ನೀಡಿದರು. ಕೊಂಡಜ್ಜಿ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿ ಡಾ. ಸುಮಿತ್ರ ಹಾಗು ಕರ್ನಾಟಕ ಗ್ರಾಮಾಂತರ ಮೂಲ ಸೌಲಭ್ಯಗಳ ಅಭಿವೃದ್ಧಿ ನಿಗಮದ ಸಹಾಯಕ ನಿರ್ದೇಶಕ ಶ್ರೀ ರಂಗರಾಜು ಹಾಗು ಕೊಂಡಜ್ಜಿ ಗ್ರಾಮ ಪಂಚಾಯತ್‌ನವರು ಹಾಗು ಇತರರು ಹಾಜರಿದ್ದು ಯಶಸ್ವಿಗೊಳಿಸಿದರು.

ಈ ತಿಂಗಳ 26 ರಿಂದ 30 ರ ವರೆವಿಗೆ ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ ರಾಷ್ಟ್ರೀಯ ಸಂಸ್ಥೆಯ ದಕ್ಷಿಣ ರಾಜ್ಯ ಪ್ರಾದೇಶಿಕ ಕಛೇರಿ ಆಯೋಜಿಸಿರುವ "ರೋವರ್ಸ್-ರೇಂಜರ್ಸ್ ಮೂಟ್" ನಲ್ಲಿ ರಾಷ್ಟ್ರದ 18-20 ರಾಜ್ಯಗಳಿಂದ 200 ರೋವರ್ಸ್ ರೇಂಜರ್ಸ್‌ಗಳು ಭಾಗವಹಿಸುತ್ತಿದ್ದಾರೆ. ಹರಿಹರದ ಶಾಸಕರಾದ ಶ್ರೀ ಹೆಚ್.ಎಸ್. ಶಿವಶಂಕರ್ ಮೇಲ್ಕಂಡ ಕಾರ್ಯಕ್ರಮವನ್ನು ದಿನಾಂಕ 27ರಂದು ಮುಖ್ಯ ಅತಿಥಿಗಳಾಗಿ ಉದ್ಘಾಟಿಸಲಿದ್ದು, ದಾವಣಗೆರೆ ಜಿಲ್ಲಾ ಪಂಚಾಯ್ತಿ ಸದಸ್ಯರಾದ ಶ್ರೀ ಹನಗವಾಡಿ ವೀರೇಶ್ ಅವರು ಗೌರವಾನ್ವಿತ ಅತಿಥಿಯಾಗಿ ಭಾಗವಹಿಸುತ್ತಾರೆ. ರಾಜ್ಯದ ಗೈಡ್ಸ್ ಆಯುಕ್ತರಾದ ಶ್ರೀಮತಿ ಶಾಂತ ವಿ. ಆಚಾರ್ಯ ಅವರು ಹಾಗು ನಾನು ಸಮಾರಂಭದಲ್ಲಿ ಪಾಲ್ಗೊಳ್ಳುತ್ತೇವೆ.

ಸ್ನೇಹಿತರೆ, ಈ ವರ್ಷದಲ್ಲಿ 6 ತಿಂಗಳುಗಳು ಮುಗಿದಿವೆ. ನಮ್ಮ ಸಂಸ್ಥೆಯ ಕಾರ್ಯ ಚಟುವಟಿಕೆಗಳು ಡಿಸೆಂಬರ್-2013, ಜನವರಿ 2014 ರೊಳಗೆ ಮುಗಿಸುವ ಎಲ್ಲ ರೀತಿಯ ಪ್ರಯತ್ನ ಮಾಡಬೇಕೆಂದು ಕೋರುತ್ತೇನೆ. ನನ್ನ ಗಮನಕ್ಕೆ ಬಂದಿರುವಂತೆ ರಾಜ್ಯದ ಹಲವಾರು ಜಿಲ್ಲಾ ಸಂಸ್ಥೆಗಳು ಕಳೆದ ಎರಡು ವರ್ಷಗಳಲ್ಲಿ ಮೂಲ ತರಬೇತಿ ಶಿಬಿರಗಳನ್ನು ಆಯೋಜಿಸದಿರುವುದು ಸಮಂಜಸಕರವಾಗಿಲ್ಲವೆಂದು ಭಾವಿಸುತ್ತೇನೆ. ಅಲ್ಲದೆ 2013-14ರಲ್ಲಿಯೂ ಬಹಳಷ್ಟು ಜಿಲ್ಲಾ ಸಂಸ್ಥೆಗಳು ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಿರುವುದಿಲ್ಲ. ತಕ್ಷಣ ಸಂಬಂಧಪಟ್ಟ ಜಿಲ್ಲಾ ಸಂಸ್ಥೆಗಳು ಅತಿ ಶೀಘ್ರದಲ್ಲಿ ತರಬೇತಿ ಶಿಬಿರಗಳನ್ನು ಏರ್ಪಡಿಸಿ ಜಿಲ್ಲೆಗಳಿಗೆ ನೀಡಿರುವ ದಳ-ಘಟಕಗಳನ್ನು ನೊಂದಣಿ ಗೊಳಿಸುವಲ್ಲಿ ಯಶಸ್ವಿಯಾಗಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ

ಕೊಂ.ಬ. ಷಣ್ಮುಖಪ್ಪ

ಕೊಂಡಜ್ಜಿ ಬ. ಷಣ್ಮುಖಪ್ಪ

## ಪ್ರಕಟಣಾ ಸಮಿತಿ ಅಧ್ಯಕ್ಷರ ನುಡಿ......

# ಗಾಂಧಿ ಜಯಂತಿ

- ಗೊ.ರು. ಚನ್ನಬಸಪ್ಪ
ಅಧ್ಯಕ್ಷರು, ಪ್ರಕಟಣಾ ಸಮಿತಿ, ಭಾ.ಸ್ಕೌ.ಗೈ

ಇದೇ ಅಕ್ಟೋಬರ್ ತಿಂಗಳ ೨ನೆಯ ದಿನ ಗಾಂಧಿ ಜಯಂತಿ. ನಮ್ಮ ಕಾಲದಲ್ಲೇ ಇದ್ದು, ಕಣ್ಮರೆಯಾದ, ಆದರೆ ಎಂದಿಗೂ ಮರೆಯಲಾಗದ ಒಂದು ಮಹಾಚೇತನ ಮಹಾತ್ಮ ಗಾಂಧಿ. ಅವರು ಭಾರತ ರಾಷ್ಟ್ರಭಕ್ತರಷ್ಟೇ ಆಗಿರಲಿಲ್ಲ; ವಿಶ್ವಪ್ರೇಮಿಗಳಾಗಿದ್ದರು, ಸತ್ಯಾನ್ವೇಷಕರಾಗಿದ್ದರು, ಅಹಿಂಸಾವಾದಿಗಳಾಗಿದ್ದರು, ಶಾಂತಿಪ್ರಿಯರಾಗಿದ್ದರು. ಅವರು ಮಹಾತ್ಮ ಎನಿಸಿಕೊಂಡದ್ದು ಈ ಮಾನವ ಘನತೆಯ ಮೌಲ್ಯಗಳಿಂದಾಗಿಯೇ.

ಸರಳತೆ, ಸ್ಪಷ್ಟತೆ, ಸಂಕಲ್ಪ, ಸಾಹಸ, ಸ್ವಾಭಿಮಾನ, ಸ್ವಾವಲಂಭನೆ, ಸ್ಥೈರ್ಯ, ಸೌಜನ್ಯ, ಸೌಹಾರ್ದ - ಈ ಎಲ್ಲ ಶಬ್ದಗಳಿಗೂ ಅವರು ಸಮನ್ವಿತ ಅರ್ಥವಾಗಿದ್ದರು. ಗಾಂಧೀಜಿ ಮಾನವೀಯ ಗುಣಗಳ ಗಣಿಯಾಗಿ ಲೋಕಕ್ಕೆ ಪರಿಚಿತರಾಗಿದ್ದರು. ಅವರ ಸಾಧನೆ ಒಂದು ಪವಾಡ ಎನಿಸಿತು.

ಗಾಂಧೀಜಿ ಎಂದೂ ತಮ್ಮನ್ನು ಪ್ರವಾದಿ ಎಂದಾಗಲೀ, ಪವಾಡ ಪುರುಷ ಎಂದಾಗಲೀ ಕರೆದುಕೊಂಡವರಲ್ಲ. ಹಾಗೆ ಕರೆಯುವವರನ್ನು ಖಂಡಿಸುತ್ತಿದ್ದರು. ಅವರು ೨೦ನೆ ಶತಮಾನದ ಬಹು ದೊಡ್ಡ ರಾಜಕೀಯ ಮತ್ತು ಸಾಮಾಜಿಕ ಚಿಂತಕರಾಗಿದ್ದರು-ಸುಧಾರಕರಾಗಿದ್ದರು. ಹಾಗೆಯೇ ಧಾರ್ಮಿಕ ವ್ಯಕ್ತಿಯೂ ಆಗಿದ್ದರು. ಅವರಿಗೆ ದೇವರ ಬಗೆಗೆ ಅಚಲವಾದ ಭಕ್ತಿಯಿತ್ತು. ಮಾನವ ಕಲ್ಯಾಣ ಎಂದರೆ, ಕೇವಲ ಆರ್ಥಿಕ ಮತ್ತು ಭೌತಿಕ ಪ್ರಗತಿಯಲ್ಲ, ಪ್ರತಿಯೊಬ್ಬ ವ್ಯಕ್ತಿಯೂ ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳನ್ನು ಮೈಗೂಡಿಸಿಕೊಳ್ಳಬೇಕು ಎಂದು ಹಂಬಲಿಸುತ್ತಿದ್ದರು.

ಭಾರತೀಯ ಪರಂಪರೆಗೆ ಅತ್ಯುನ್ನತ ಗೌರವ ನೀಡಿದ್ದ ಮಹಾತ್ಮಗಾಂಧಿ ಓರ್ವ ಸಂತರಾಗಿದ್ದರು; ದಾರ್ಶನಿಕರಾಗಿದ್ದರು. ಆದರೆ ಅವರು ಉಳಿದ ಸಂತರಂತೆ ಜಪ-ತಪ ಮಾಡುತ್ತ ಕುಳಿತವರಲ್ಲ. ಕೇವಲ ಧಾರ್ಮಿಕ ಚಿಂತನೆಯಲ್ಲೆ ತೊಡಗಿದವರೂ ಅಲ್ಲ. ಲೌಕಿಕ ಸೇವೆಯು ಧರ್ಮದ ಸೂತ್ರದ ಮೇಲೆ ನಡೆಯಬೇಕೆಂದು ತಿಳಿದಿದ್ದವರು. ಎಂತಲೇ ತಮ್ಮ ಸಮಕಾಲೀನ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಗಳ ಅನಿಷ್ಟದ ವಿರುದ್ಧ ಹೋರಾಟಕ್ಕೆ ನಿಂತರು. ಆ ಹೋರಾಟಕ್ಕಾಗಿ ದೇಶದ ಕೋಟಿ ಕೋಟಿ ಜನರನ್ನು ಸಂಘಟಿಸಿದರು.

ದೇಶಕ್ಕೆ ಸ್ವಾತಂತ್ರ್ಯ ಪಡೆಯುವುದೊಂದೇ ಗಾಂಧೀಜಿ ಅವರ ಗುರಿಯಾಗಿರಲಿಲ್ಲ. ಈ ದೇಶದ ಜನ ಸ್ವತಂತ್ರವಾಗುವುದರ ಜೊತೆಗೆ ಸ್ವಾಭಿಮಾನಿಗಳಾಗಿ, ಸ್ವಾವಲಂಭಿಗಳಾಗಿ, ಸಭ್ಯರಾಗಿ ನೆಮ್ಮದಿಯಿಂದ ಬಾಳುವಂತಾಗಬೇಕೆಂಬುದು ಅವರ ಹಂಬಲವಾಗಿತ್ತು. ಸ್ವಾತಂತ್ರ್ಯ ಸಾಧನೆಗೆ ಮತ್ತು ರಕ್ಷಣೆಗೆ ಸಮರ್ಥ ವ್ಯಕ್ತಿ ನಿರ್ಮಾಣವು ಅವರಿಗೆ ಮುಖ್ಯವಾಗಿತ್ತು. ಅವರ ಹೋರಾಟದಲ್ಲಿ ನಾನಾ ಜಾತಿ, ಮತ, ಪಂಥ, ವರ್ಣ, ವರ್ಗ, ಧರ್ಮ, ಪ್ರಾಂತ್ಯ, ಭಾಷೆ, ಪದ್ಧತಿಗಳ ಜನರೆಲ್ಲ ಭಿನ್ನ ಭೇದವಿಲ್ಲದೆ ಪಾಲುಗೊಂಡರು. ಅವರಲ್ಲಿ ರಾಜವಂಶದವರಿದ್ದರು, ಕೋಟ್ಯಾಧೀಶರಿದ್ದರು, ಸಂತರಿದ್ದರು, ಹಾಗೆಯೇ ದೀನ ದಲಿತ ಶ್ರಮಜೀವಿಗಳಿದ್ದರು. ಗಾಂಧೀಜಿ ಅವರು ಒಂದು ರೀತಿಯಲ್ಲಿ ಗುರುತ್ವಾಕರ್ಷಕ ಶಕ್ತಿಯಾಗಿದ್ದರು. ಬಾಪೂಜಿ ಬಳಿಗೆ ಬಂದವರೆಲ್ಲ ಅವರನ್ನು ರಾಜಕೀಯ ವ್ಯಕ್ತಿ ಎಂದು ಕಾಣುತ್ತಿರಲಿಲ್ಲ. ಅವರೊಬ್ಬ ಜೀವನಯೋಗಿ ಎಂಬಂತೆ ಕಂಡರು. ಹಾಗಾಗಿ ಗಾಂಧೀಜಿ ಅವರು ಲೋಕಪೂಜ್ಯರೆನಿಸಿಕೊಂಡರು. ಮಹಾತ್ಮ ಎನಿಸಿಕೊಂಡರು. ಅಷ್ಟಾದರೂ ಅವರು ವಿನಮ್ರತೆ-ಸರಳತೆಗಳಿಗೆ ಲೋಕ ಸಾಕ್ಷಿಯಾಗಿದ್ದರು.

ಇಂತಹ ಮಹೋನ್ನತ ಜೀವಿ ತಮ್ಮ ಅಂತ್ಯಕಾಲದಲ್ಲಿ ಕಂಡದ್ದೇ ಬೇರೆ. ಅವರು ಯಾರ ಒಳಿತಿಗಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ಬದುಕನ್ನೇ ಪಣವಾಗಿ ಇಟ್ಟಿದ್ದರೋ, ಆ ಒಳಿತಿನ ಬದಲಾಗಿ ಕೆಡುಕುಗಳ ಕ್ರೂರ ದುರಂತ ದೃಶ್ಯಗಳನ್ನೇ ಕಾಣಬೇಕಾಯಿತು. ಸ್ವಾತಂತ್ರ್ಯ ಬಂದಿತೆಂದು ದೇಶವೆಲ್ಲ ಸಂಭ್ರಮ ಪಡುತ್ತಿರುವಷ್ಟರಲ್ಲೇ ಮತಿಹೀನನೊಬ್ಬ ಅವರ ಮೇಲೆ ಗುಂಡು ಹಾರಿಸಿಬಿಟ್ಟ, ಭಾರತ ತನ್ನ ರಾಷ್ಟ್ರಪಿತನನ್ನು ಕಳೆದುಕೊಂಡಿತು.

ಮಹಾಕವಿ ಕುವೆಂಪು ಅವರು ಗಾಂಧೀಜಿಗೆ ಶ್ರದ್ಧಾಂಜಲಿ ಅರ್ಪಿಸುತ್ತಾ **"ರಾಷ್ಟ್ರಪಿತ ದಿವಂಗತ, ಉನ್ಮತ, ಹಸ್ತಹತ, ನರಹೃದಯದ ವಿಷವಾರ್ಧಿಗೆ ಜೀವಾಮೃತ ಸಮರ್ಪಿತ. ಕ್ಷಮಿಸು ಓ ಜಗತ್ಪಿತ, ಅದೃಷ್ಟಹೀನ ಭಾರತ!"** ಎಂದಿದ್ದಾರೆ. ನಮ್ಮ ಕಾಲದ ಈ ವಿಭೂತಿ ಪುರುಷ ದೇಶಕ್ಕೆ ನೀಡಿದ ಸಂದೇಶಕ್ಕೆ, ಬದುಕಿದ ಆದರ್ಶಕ್ಕೆ ಇಂದು ಒದಗಿರುವ ದುಃಸ್ಥಿತಿಯನ್ನು ಕಂಡು ಹಿರಿಯ ಕವಿ ಸಿ.ಪಿ.ಕೆ. ಅವರು ಒಂದು ಕಡೆ "ಗಾಂಧಿ ಜಯಂತಿಯಂದು ಮಾಂಸ ತಿನ್ನಬಹುದೇ ಎಂದು ಮನಸ್ಸೊಮ್ಮೆ ಕೇಳಿತು. ಆಗ ಮನಸ್ಸೇ ಹೇಳಿತು – ಅಯ್ಯೋ ಹುಚ್ಚ, ಗಾಂಧಿಯನ್ನೇ ಕೊಂದಿದ್ದೇವೆ, ಮಾಂಸದಲ್ಲೇನಿದೆ?" ಎಂದು ತಮ್ಮ ಒಂದು ಹನಿಗವನದಲ್ಲಿ ಹೇಳಿದ್ದಾರೆ.

ಈ ಕವಿ ನುಡಿಗೆ ಕಿವಿಗೆ ಸ್ವಾರಸ್ಯವೆನಿಸಿದರೂ 'ಗಾಂಧಿ ಜಯಂತಿ'ಯನ್ನು ಆಚರಿಸುತ್ತಿರುವ ನಮ್ಮನ್ನು ಅಣಕಿಸುವಂತಿದೆ. ಗಾಂಧೀಜಿ ಅವರ ವಿಶಾಲ ಮನಸ್ಸನ್ನು ಅರ್ಥಮಾಡಿಕೊಳ್ಳದೆ ನಾವು ಅವರ ಜಯಂತಿ ಆಚರಿಸುವುದು ಕೇವಲ ತೋರಿಕೆಯಾಗುತ್ತದೆ.

**ನಾವು ಗಾಂಧಿ ಜಯಂತಿಯಂದು ಅವರನ್ನು ಕೇವಲ ಸ್ಮರಿಸಿದರೆ ಸಾಲದು, ಅವರ ಆದರ್ಶವನ್ನು ನಮ್ಮ ನಡೆ-ನುಡಿಗಳಲ್ಲಿ ತುಂಬಿಕೊಳ್ಳಬೇಕು. ಅಂತಾದರೆ ಮಾತ್ರ ಅವರ ಜಯಂತಿ ಅರ್ಥಪೂರ್ಣವಾಗುತ್ತದೆ.**

ರಾಜ್ಯ ವಾರ್ತೆ.............

# State Level Training Courses from 31-08-2013 to 07-09-2013 at Dr. Annie Besant State Training & Camping Centre Doddaballapur

| Sl. No. | Name of the Course | Leader & Staff | No of Candidates |
|---|---|---|---|
| 1. | Intorductury Cum Basic Course for Cub Masters | Ms. Ravikala ALT(C)<br>Mr David HWB(C) | 13 |
| 2. | Introductory Cum Basic Course for Rover Scout Leaders | Mr A.M. Shankar LT (R)<br>Mr Ganapathi Pre-ALT(R)<br>Mr. Deshapande Adv.(R)<br>Mr Danniel Basic (R) | 17 |
| 3. | Advanced Course for Scout Masters (2 Courses) | Mr C.S. Reddy LT(S)<br>Mr. Jimmy Siquera LT(S)<br>Mr G.C., Devaraju LT(S)<br>Mr. B.D. Farnandes LT(S)<br>Mr. P. Manjunathappa ALT(S)<br>Mr S.M. Chalageri ALT(C) | 43 |
| 4. | Pioneering Cum Estimation Training Course | Mr. Sharaf Madappa LT(S)<br>Mrs. K.K. Leela LT(G)<br>Mr. Babur Rao Nimbure ALT(S) | 25 |

Sri C.S. Reddy, Hon. STC(S) maintained all the courses. Sri Kondajji B. Shanmukhappa, State Chief Commissioner visited on 06-09-2013 & blessed the Participants.

# ರೋವರ್ಸ್‌ಗಳ ರಾಜ್ಯ ಮಟ್ಟದ ಸಮುದಾಯ ಅಭಿವೃದ್ಧಿ ಶಿಬಿರ

ರೋವರ್‌ಗಳ ರಾಜ್ಯ ಮಟ್ಟದ ಸಮುದಾಯ ಅಭಿವೃದ್ಧಿ ಶಿಬಿರವನ್ನು ದಿನಾಂಕ 26-08-2013 ರಿಂದ 30-08-2013 ರ ವರೆಗೆ ಶ್ರೀ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿಯಲ್ಲಿ ಆಯೋಜಿಸಲಾಗಿತ್ತು.

ಶಿಬರದಲ್ಲಿ 500 ಸಸಿಗಳನ್ನು ನೆಟ್ಟು ಪ್ಲಾಸ್ಟಿಕ್ / ಕಸ ನಿರ್ಮೂಲನೆ ಮಾಡಲಾಯಿತು. ಕೊಂಡಜ್ಜಿ ಗ್ರಾಮದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಆವರಣ, ಪ್ರೌಢಶಾಲೆ, ಗ್ರಾಮ ಪಂಚಾಯ್ತಿ ಕಛೇರಿ ಆಸುಪಾಸು ಹಾಗು ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಸ್ವಚ್ಛತಾ ಕಾರ್ಯವನ್ನು ಮಾಡಿ ಸಸಿಗಳನ್ನು ನೆಡಲಾಯಿತು. ಆರೋಗ್ಯ ಕೇಂದ್ರದ ಆರೋಗ್ಯಾಧಿಕಾರಿಗಳಾದ ಡಾ॥ ಸುಮಿತ್ರಾರವರು ರೋವರ್‌ಗಳಿಗೆ ಆರೋಗ್ಯದ ಅರಿವು ಹಾಗು ಹದಿಹರೆಯದವರ ಸಮಸ್ಯೆ ಕುರಿತು ಮಾಹಿತಿ ನೀಡಿದರು. ರೋವರಿಂಗ್‌ಗೆ ಸಂಬಂಧಿಸಿದ ವಿಷಯಗಳಾದ ಪ್ರಥಮ ಚಿಕಿತ್ಸೆ, ಗಂಟುಗಳ ಬಗ್ಗೆ ರೋವರ್ ಪ್ರಗತಿಪರ ಪದಕಗಳು ಪಡೆಯಲು ಅವಶ್ಯವಾದ ಮಾಹಿತಿಗಳನ್ನು ನೀಡಲಾಯಿತು. ಶಿಬಿರಾಗ್ನಿ ಕಾರ್ಯಕ್ರಮ ಹಾಗೂ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯಿತು. ದಿನಾಂಕ 28-08-2013 ರಂದು ದಾವಣಗೆರೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀಯುತ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಶಿವಪ್ಪ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು, ಶ್ರೀ ತಮ್ಮಣ್ಣ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಶಿಬಿರಕ್ಕೆ ಭೇಟಿ ನೀಡಿದರು.

ಶಿಬಿರದ ಸಮಾರೋಪ ಸಮಾರಂಭವು ದಿನಾಂಕ 30-08-2013 ರಂದು ಮದ್ಯಾಹ್ನ 2.00 ಗಂಟೆಗೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರ ಅಧ್ಯಕ್ಷತೆಯಲ್ಲಿ ಜರುಗಿತು. ಮುಖ್ಯ ಅತಿಥಿಗಳಾಗಿ ಶ್ರೀ ವಿಶ್ವನಾಥ ಪಿ. ಮುದಜ್ಜಿ ಮುಖ್ಯ ಯೋಜನಾಧಿಕಾರಿಗಳು, ಕೊಂಡಜ್ಜಿ ಪ್ರಾಥಮಿಕ ಆರೋಗ್ಯ ಕೇಂದ್ರ, ಶ್ರೀ ರಂಗರಾಜು ಅಸಿಸ್ಟೆಂಟ್ ಡೈರೆಕ್ಟರ್, ಲ್ಯಾಂಡ್ ಆರ್ಮಿ, ಶ್ರೀ ಕೊಟ್ರೇಶ್, ಫಾರ್ಮಸಿಸ್ಟ್, ರವರು ಉಪಸ್ಥಿತರಿದ್ದರು. ಮುಖ್ಯ ಅತಿಥಿಯಾಗಿ ಮಾತನಾಡಿದ ಶ್ರೀ ವಿಶ್ವನಾಥ ಪಿ. ಮುದಜ್ಜಿರವರು ಈ ಶಿಬಿರಕ್ಕೆ ಭೇಟಿನೀಡಿರುವುದು ನನಗೆ ಸಂತೋಷ ಎನಿಸಿದೆ. ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ -ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರಕ್ಕೆ ಅಗತ್ಯವಾದ ಸಹಾಯ ಹಾಗೂ ಸಹಕಾರ ನೀಡಲು ಇಲಾಖೆಯಿಂದ ಕ್ರಮಕೈಗೊಳ್ಳುವುದಾಗಿ ತಿಳಿಸಿದರು. ಡಾ॥ ಸುಮಿತ್ರ, ವೈದ್ಯಾಧಿಕಾರಿಗಳು, ಆರೋಗ್ಯ ಅರಿವು ಮತ್ತು ಹದಿಹರೆಯದವರ ಸಮಸ್ಯೆಗಳ ಕುರಿತು ಮಾಹಿತಿ ನೀಡಿದರು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿ ಮಾತನಾಡಿ ರೋವರ್ಸ್‌ಗಳ ಧ್ಯೇಯ ವಾಕ್ಯ, ಸೇವೆ. ರೋವರ್‌ಗಳು ಸಮಾಜ ಸೇವೆಗೆ ಬದ್ಧರಾಗಿರಬೇಕೆಂದು ತಿಳಿಸಿದರು. ಜಿಲ್ಲಾ ಪಂಚಾಯ್ತಿಯಿಂದ ಕೊಂಡಜ್ಜಿ ತರಬೇತಿ ಶಿಬಿರ ಕೇಂದ್ರಕ್ಕೆ ಅಗತ್ಯ ಧನ ಸಹಾಯ ಮಾಡುವಂತೆ ಜಿಲ್ಲಾ ಯೋಜನಾಧಿಕಾರಿಗಳನ್ನು ಕೋರಿದರು. ಕಳೆದ 38 ವರ್ಷಗಳಿಂದ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ ಸಂಸ್ಥೆಯ ನೌಕರರಾದ ಶ್ರೀ ಚನ್ನವೀರಪ್ಪ ಇವರು ನಿವೃತ್ತಿಯಾದ ಪ್ರಯುಕ್ತ ಸಂಸ್ಥೆಯಿಂದ ಬೀಳ್ಕೊಡುಗೆ ನೀಡಿ ಸನ್ಮಾನಿಸಲಾಯಿತು. ಶ್ರೀ ಎಲ್.ಟಿ. ಲೋಕೇಶ್, ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಸ್ವಾಗತಿಸಿದರು. ಶ್ರೀ ಡಿ. ಬಸವರಾಜ ವಂದನೆ ಸಲ್ಲಿಸಿದರು. ಶ್ರೀ ಗೋಪಾಲಕೃಷ್ಣ, ಜಿಲಾ ಸಂಘಟಕರು ಕಾರ್ಯಕ್ರಮ ನಿರೂಪಿಸಿದರು.

ಶ್ರೀ ಎ.ಎಂ. ಶಂಕರ್ ಎಲ್.ಟಿ.(ರೋ) ಶಿಬಿರದ ನಾಯಕರಾಗಿದ್ದರು. ರಾಜ್ಯದ ಜಿಲ್ಲೆಗಳಿಂದ 171 ರೋವರ್‌ಗಳು ಶಿಬಿರದಲ್ಲಿ ಭಾಗವಹಿಸಿದ್ದರು.

# ಜಿಲ್ಲಾ ವಾರ್ತೆಗಳು

## ಕೋಲಾರ

ದಿನಾಂಕ 21-08-2013 ರಂದು ಕೋಲಾರ, ಮುಳಬಾಗಲು, ಶ್ರೀನಿವಾಸಪುರ ತಾಲ್ಲೂಕುಗಳ ಜಿಲ್ಲಾ ಸ್ಕೌಟರ್-ಗೈಡರ್ ಸಮಾವೇಶವನ್ನು ಶ್ರೀ ವೇಣು ವಿದ್ಯಾಸಂಸ್ಥೆ, ಶ್ರೀನಿವಾಸಪುರದಲ್ಲಿ ಹಮ್ಮಿಕೊಳ್ಳಲಾಗಿತ್ತು. ಉದ್ಘಾಟನಾ ಕಾರ್ಯಕ್ರಮದಲ್ಲಿ ಶ್ರೀ ವೇಣು ವಿದ್ಯಾಸಂಸ್ಥೆಯ ಆಡಳಿತಾಧಿಕಾರಿಯಾದ ಶ್ರೀ ಗೋಪಾಲ ಗೌಡ ಬಿ, ಸರ್ಕಾರಿ ನೌಕರರ ಸಂಘದ ಅಧ್ಯಕ್ಷರಾದ ಶ್ರೀ ಬಂಗವಾದಿ ನಾಗರಾಜ್, ಶ್ರೀ ಬೈರೇಗೌಡ, ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಸಿ.ಎಸ್. ರೆಡ್ಡಿಯವರು ಭಾಗವಹಿಸಿದ್ದರು. ಮುಖ್ಯ ಅತಿಥಿಗಳು ಹಾಗೂ ಜಿಲ್ಲಾ ಸಂಸ್ಥೆ, ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ಜ್ಯೋತಿ ಬೆಳಗುವುದರೊಂದಿಗೆ ಕಾರ್ಯಕ್ರಮ ಆರಂಭವಾಯಿತು. ನಂತರ ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ರಾಮಕೃಷ್ಣೇಗೌಡರು ಸ್ವಾಗತಿಸಿದರು. ಶ್ರೀ ಗೋಪಾಲಗೌಡರು ತಮ್ಮ ಮುಖ್ಯ ಅತಿಥಿಗಳ ಭಾಷಣದಲ್ಲಿ ಇಂದು ಸಮಾಜದಲ್ಲಿ ಉತ್ತಮ ಸಂಸ್ಕಾರ, ಸೇವಾ ಮನೋಭಾವ ಕಣ್ಮರೆಯಾಗುತ್ತಿದೆ. ಆದ್ದರಿಂದ ಸ್ಕೌಟರ್-ಗೈಡರ್‌ಗಳು ವಿದ್ಯಾರ್ಥಿಗಳಲ್ಲಿ ಸೇವಾ ಮನೋಭಾವ, ಉತ್ತಮ ಸಂಸ್ಕಾರ, ಬೆಳೆಸಬೇಕೆಂದು ಕರೆನೀಡಿದರು. ನಂತರ ಶ್ರೀ ನಾಗರಾಜ್ ರವರು ಕೆಲವು ಹಿತನುಡಿಗಳನ್ನಾಡಿದರು. ನಂತರ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ವಿ.ಎಂ. ನಾರಾಯಣಸ್ವಾಮಿರವರು ಅತಿಥಿಗಳಿಗೆ ವಂದನಾರ್ಪಣೆಯನ್ನು ಸಲ್ಲಿಸಿದರು. ನಂತರ ನಡೆದ ಕಾರ್ಯಕ್ರಮಗಳಲ್ಲಿ ಶ್ರೀ ಸಿ.ಎಸ್. ರೆಡ್ಡಿ ಗೌ॥ ರಾ.ತ. ಆಯುಕ್ತರು, (ಸ್ಕೌ) ಶ್ರೀ ಎನ್. ಶ್ರೀನಿವಾಸನ್, ಕೇ.ಸ್ಥಾ.ಆ., ಶ್ರೀ ವಿ.ಎಂ. ನಾರಾಯಣಸ್ವಾಮಿ ಎ.ಎಲ್.ಟಿ.(ಕ) ವಿವಿಧ ವಿಷಯಗಳ ಬಗ್ಗೆ ಮಾಹಿತಿ ನೀಡಿದರು.

## ಚಾಮರಾಜನಗರ

ದಿನಾಂಕ 28-08-2013 ರಂದು ಜೆ.ಹೆಚ್. ಪಟೇಲ್ ಭವನ, ಚಾಮರಾಜನಗರದಲ್ಲಿ ಪ್ರಥಮ ದರ್ಜೆ ಕಾಲೇಜು ಪ್ರಾಂಶುಪಾಲರು, ಪ್ರೌಢಶಾಲಾ ಮುಖ್ಯ ಶಿಕ್ಷಕರು, ಬಿ.ಇ.ಓ., ಬಿ.ಆರ್.ಸಿ., ಇ.ಓ., ವಿಷಯ ಪರಿವೀಕ್ಷಕರು, ದೈಹಿಕ ಶಿಕ್ಷಣ ಅಧಿಕಾರಿಗಳು, ಬಿ.ಆರ್.ಪಿ. ಮತ್ತು ಸಿ.ಆರ್.ಪಿ. ರವರುಗಳಿಗೆ ಒಂದು ದಿವಸದ ಸ್ಕೌಟ್-ಗೈಡಿನ ಸಾಮಾನ್ಯ ಮಾಹಿತಿ ತರಬೇತಿ ನಡೆಯಿತು.

ಶ್ರೀ ಕೆ.ಎಸ್. ಮಹಾದೇವಸ್ವಾಮಿ, ಜಿಲ್ಲಾ ಕಾರ್ಯದರ್ಶಿ ಸ್ವಾಗತ ಕೋರಿದರು. ಶ್ರೀ ಮಂಜುನಾಥ, ಶಿಕ್ಷಣಾಧಿಕಾರಿ, ಉಪಸ್ಥಿತರಿದ್ದರು. ಶ್ರೀ ಜಿ.ಆರ್. ಅಶ್ವತ್ ನಾರಾಯಣ್, ಡಿ.ಸಿ.ಸಿ., ರವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಗೀತಾಂಬ ಕ್ಷೇತ್ರ ಸಂಪನ್ಮೂಲ ಸಮನ್ವಯಾಧಿಕಾರಿಗಳವರು ಹಾಗೂ ಶ್ರೀ ವಿ. ಮಲ್ಲಿಕಾರ್ಜುನ ಸ್ವಾಮಿ ಡಿ.ಸಿ.,(ಎಸ್) ಶ್ರೀಮತಿ ಬರ್ನಾರೇಟ್ ಲಿವೀಸ್ ಡಿ.ಸಿ.(ಜಿ.) ಶ್ರೀ ಪಿ. ರಾಜು ಜಿಲ್ಲಾ ಉಪಾಧ್ಯಕ್ಷರುಗಳು ಭಾಗವಹಿಸಿದ್ದರು. ಶ್ರೀ ಚಿನ್ನಸ್ವಾಮಿ ರೆಡ್ಡಿ ಎಸ್.ಟಿ.ಸಿ.(ಎಸ್) ಶ್ರೀಮತಿ ಜಾನಕಿ ವೇಣುಗೋಪಾಲ್, ಎಸ್.ಓ.ಸಿ.,(ಎಸ್.) ಶ್ರೀಮತಿ ಕೆ.ಕೆ. ಲೀಲಾ ಎಸ್.ಟಿ.ಸಿ.(ಜಿ) ಶ್ರೀಮತಿ ಗೀತಾ ನಟರಾಜ್, ಶ್ರೀಮತಿ ರಾಮಲತಾ ರವರು, ಜಂಟಿ ರಾಜ್ಯ ಕಾರ್ಯದರ್ಶಿ ಮತ್ತು ಶ್ರೀ ವಿ.ಎಂ. ರಾಮಚಂದ್ರ ಸಂಪನ್ಮೂಲ ವ್ಯಕ್ತಿಗಳಾಗಿದ್ದರು.

## ಚಿತ್ರದುರ್ಗ

ದಿನಾಂಕ : 08-08-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಹೊಸದುರ್ಗದ ತಾಲ್ಲೂಕು ಮಟ್ಟದ ಸಮಾವೇಶವು ತರಳಬಾಳು ಪ್ರೌಢಶಾಲೆಯಲ್ಲಿ ನೆರವೇರಿತು. ಈ ಸಮಾವೇಶದಲ್ಲಿ 75 ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಶ್ರೀ ತಿಪ್ಪೇಸ್ವಾಮಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಮಾವೇಶವನ್ನು ಉದ್ಘಾಟಿಸಿದರು. ಅವರು ಶಿಕ್ಷಕರನ್ನು ಉದ್ದೇಶಿಸಿ ಮಾತನಾಡುತ್ತಾ ಪ್ರತಿಯೊಂದು ಶಾಲೆಯಲ್ಲಿರುವ ಘಟಕಗಳು ಉತ್ತಮ ಕ್ರಿಯಾ ಯೋಜನೆಯನ್ನು ರೂಪಿಸಿ, ಮುಖ್ಯೋಪಾಧ್ಯಾಯರ ಜೊತೆ ಚರ್ಚಿಸಿ, ಗುಣಮಟ್ಟದ ಶಿಕ್ಷಣವನ್ನು ನೀಡಲು ವ್ಯವಸ್ಥಿತ ಕ್ರಮಗಳನ್ನು ಕೈಗೊಳ್ಳಲು ಸೂಚಿಸಿದರು.

ಸರ್ವ ಶಿಕ್ಷಣ ಅಭಿಯಾನದ ಅಡಿ ಪ್ರತಿ ಶಾಲೆಯ ಒಂದು ಮಗುವಿಗೆ 200 ರೂಗಳಂತೆ ಸ್ಕೌಟ್ ಮತ್ತು ಗೈಡ್ ಸಮವಸ್ತ್ರವನ್ನು ಹೊಲಿಸಲು ಆದೇಶವನ್ನು ನೀಡಿದರು. ಜಿಲ್ಲಾ ಸ್ಕೌಟ್ ಆಯುಕ್ತರು ಶಿಕ್ಷಕರನ್ನು ಉತ್ತಮ ಮಾತುಗಳಿಂದ ಪ್ರೋತ್ಸಾಹಿಸಿದರು. ಶ್ರೀ ಧನಪಾಲ್ ಕೇಂದ್ರ ಕಛೇರಿ ಆಯುಕ್ತರು ಮಾರ್ಗದರ್ಶನ ನೀಡಿದರು. ಶ್ರೀ ಯೋಗರಾಜ್ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಹಾಗೂ ಶ್ರೀ ಪಾರ್ಥಸಾರಥಿ, ದೈಹಿಕ ಶಿಕ್ಷಣ ಅಧಿಕಾರಿಗಳು ಉಪಸ್ಥಿತರಿದ್ದರು.

## ಬಾಗಲಕೋಟೆ

ದಿನಾಂಕ 15-08-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಕೇಂದ್ರ ಕಛೇರಿಯ ಆವರಣದಲ್ಲಿ 67ನೇ ಸ್ವಾತಂತ್ರ್ಯೋತ್ಸವವನ್ನು ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಜಿಲ್ಲೆಯ ಸುಮಾರು 100 ಕ್ಕಿಂತಲೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಹಾಗೂ ಜಿಲ್ಲೆಯ ಪದಾಧಿಕಾರಿಗಳು ಹಾಜರಿದ್ದರು. ಬೆಳಿಗ್ಗೆ ಮಾನ್ಯ ಉಪಾಧ್ಯಕ್ಷರು ಶ್ರೀ ಜಿ.ಎನ್. ಪಾಟೀಲ ಇವರು ಧ್ವಜಾರೋಹಣವನ್ನು ನೆರವೇರಿಸಿದರು. ಸ್ವಾತಂತ್ರೋತ್ಸವವನ್ನು ಕುರಿತು ತಮ್ಮ ಸಂದೇಶದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಹಿರಿಯರನ್ನು ಸ್ಮರಿಸಿದರು. ಶ್ರೀ ಜಿ.ಬಿ. ಇದ್ದಲಗಿ, ಎಲ್ಲರನ್ನೂ ಸ್ವಾಗತಿಸಿದರು. ಕೊನೆಯಲ್ಲಿ ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಚಂದ್ರಶೇಖರ, ಅ. ಸಾವಳಗಿ ಎಲ್ಲರನ್ನು ವಂದಿಸಿದರು. ನಂತರ ನವನಗರದ ಜಿಲ್ಲಾ ಕ್ರೀಡಾಂಗಣದಲ್ಲಿ ರೋವರ್ಸ್-ರೇಂಜರ್ಸ್, ಸ್ಕೌಟ್-ಗೈಡ್ ನಾಲ್ಕು ತಂಡಗಳು ಪಥಸಂಚಲನೆಯಲ್ಲಿ ಭಾಗವಹಿಸಿದರು.

## ಶಿರಸಿ

ದಿನಾಂಕ : 20-07-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಳಿಯಾಳ ಸ್ಥಳೀಯ ಸಂಸ್ಥೆಯ ವಾರ್ಷಿಕ ಮಹಾಸಭೆ ಮತ್ತು ಒಂದು ದಿನದ ಪುನಶ್ಚೇತನ ಶಿಬಿರವನ್ನು ಪಟ್ಟಣ ಪಂಚಾಯತ ಸಭಾಂಗಣ ಹಳಿಯಾಳದಲ್ಲಿ ಆಯೋಜಿಸಲಾಗಿತ್ತು. ಜಿಲ್ಲಾ ಸಂಘಟಕ ಎಸ್.ಎನ್. ಗೋಪಾಲಕೃಷ್ಣ ಶಿಬಿರವನ್ನು ನಡೆಸಿಕೊಟ್ಟರು.

ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಮತ್ತು ತಹಶೀಲ್ದಾರರು ಆದ ಶ್ರೀಮತಿ ಶಾರದಾ ಕೋಲಕಾರ ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಕೆ. ಶಾಮರಾವ್ ಪ್ರಶಸ್ತಿ ಪಡೆದ ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಬಿ.ಆರ್. ವಿಭೂತಿಯವರನ್ನು ಸನ್ಮಾನಿಸಲಾಯಿತು. ಸಭೆಯಲ್ಲಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರು ಮತ್ತು ವಿಧಾನ ಪರಿಷತ್ ಸದಸ್ಯರಾದ ಶ್ರೀ ಎಸ್.ಎಲ್. ಘೋಟ್ನೇಕರ್, ಶ್ರೀಮತಿ ಸುಮಂಗಲಾ ಅಂಗಡಿ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಸಿ.ಎಸ್. ನಾಯಕ್, ತಾಲೂಕಾ ಪಂಚಾಯತ ಕಾರ್ಯನಿರ್ವಹಣಾಧಿಕಾರಿ

ಶ್ರೀ ಸಿ.ಎಸ್. ಚಿಕ್ಕಮಠ, ಪಟ್ಟಣ ಪಂಚಾಯತ ಮುಖ್ಯಾಧಿಕಾರಿ ಶ್ರೀ ಅನ್ಸಾರ್ ಆಲಿ, ಉಪಸ್ಥಿತರಿದ್ದರು. ಪಟ್ಟಣ ಪಂಚಾಯತ ಆವರಣದಲ್ಲಿ ಗಿಡ ನೆಡುವ ಮೂಲಕ ವನಮನೋತ್ಸವವನ್ನು ಸಹ ಆಚರಿಸಲಾಯಿತು. ರಾಜ್ಯ ಸಂಸ್ಥೆ ನೀಡಿದ ಸಮವಸ್ತ್ರಗಳನ್ನು ನೀಡಲಾಯಿತು. ಆರಂಭದಲ್ಲಿ ಸಹಾಯಕ ಜಿಲ್ಲಾ ಆಯುಕ್ತ ಶ್ರೀ ಆರ್. ವಾಯ್. ಘಟಕಾಂಬಳೆ ಸ್ವಾಗತಿಸಿದ್ದರು, ಕಾರ್ಯದರ್ಶಿ ಶ್ರೀಮತಿ ಲಿನೆಟ್ ಸೇರಾವೊ ವಂದಿಸಿದರು. ಕಾರ್ಯಕ್ರಮವನ್ನು ಸ್ಕೌಟರ್ ಶ್ರೀ ಸಿದ್ದು ಬಿರಾದಾರ ನಿರ್ವಹಿಸಿದ್ದರು.

*************

ದಿನಾಂಕ 24-07-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಾಂಡೇಲಿ ಸ್ಥಳೀಯ ಸಂಸ್ಥೆಯ ವಾರ್ಷಿಕ ಮಹಾಸಭೆಯು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಬಂಗೂರ ನಗರ, ದಾಂಡೇಲಿಯಲ್ಲಿ ನಡೆಯಿತು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಕೆ.ಎನ್. ತಿಗಡಿ ಸಭಾಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಸಂಘಟಕ ಎಸ್.ಎನ್. ಗೋಪಾಲಕೃಷ್ಣ ಸ್ಥಳೀಯ ಸಂಸ್ಥೆಯ ಸ್ಕೌಟರ್ ಮತ್ತು ಗೈಡರ್‌ಗಳಿಗೆ ಪುನಶ್ಚೇತನ ಶಿಬಿರ ನಡೆಸಿಕೊಟ್ಟರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಜಿ. ವಾಯ್ ತಳವಾರ ಕಾರ್ಯಕ್ರಮ ನಡೆಸಿಕೊಟ್ಟರು.

*************

ದಿನಾಂಕ 26-07-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಿದ್ಧಾಪುರ ಸ್ಥಳೀಯ ಸಂಸ್ಥೆಯ ವಾರ್ಷಿಕ ಮಹಾಸಭೆಯು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಸಿದ್ಧಾಪುರದಲ್ಲಿ ನಡೆಯಿತು. ಜಿಲ್ಲಾ ಸಂಘಟಕ ಶ್ರೀ ಎಸ್.ಎನ್. ಗೋಪಾಲಕೃಷ್ಣ ಸ್ಥಳೀಯ ಸಂಸ್ಥೆಯ ಸ್ಕೌಟರ್ ಮತ್ತು ಗೈಡರ್‌ಗಳಿಗೆ ಪುನಶ್ಚೇತನ ಶಿಬಿರ ನಡೆಸಿಕೊಟ್ಟರು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಬಿ.ವಿ. ನಾಯಕ್, ಅಕ್ಷರ ದಾಸೋಹ ತಾಲೂಕಾ ನಿರ್ದೇಶಕರು ಶ್ರೀ ಜಿ.ಐ. ನಾಯ್ಕ್ ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿಗಳಾಧ ಶ್ರೀ ಎಸ್. ಜಿ. ಹೆಗಡೆ, ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಜಿ.ಜಿ. ಹೆಗಡೆ ಬಾಳಗೋಡ ಉಪಸ್ಥಿತರಿದ್ದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಜಿ.ಜಿ. ಹೆಗಡೆ ಮತ್ತು ಖಜಾಂಚಿ ಶ್ರೀ ಮಹೇಶ ಶೇಟ್ ಕಾರ್ಯಕ್ರಮ ನಡೆಸಿಕೊಟ್ಟರು.

## ಕಾರವಾರ

ದಿನಾಂಕ 01-80-2013 ರಿಂದ 03-08-2013 ರ ವರೆಗೆ ಜಿಲ್ಲಾ ಪುರಸ್ಕಾರ ಪರೀಕ್ಷಾ ಶಿಬಿರ ಕುಮಟಾದ ಡಯಟ್‌ನಲ್ಲಿ ನಡೆಯಿತು. ಸಮಾರೋಪ ಸಮಾರಂಭದಲ್ಲಿ ಡಯಟ್ ಪ್ರಾಚಾರ್ಯ ಶ್ರೀ ಎಸ್.ಟಿ. ವೈದ್ಯ ಮಾತನಾಡಿ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರತಿಜ್ಞೆ ನಿಯಮದಂತೆ ದೇಶದ ಸತ್ಪ್ರಜೆಗಳಾಗಬೇಕು. ವಿದ್ಯಾರ್ಥಿ ಜೀವನ ನೆನಪಿನಲ್ಲಿ ಇರಬೇಕೆಂದರು.

ರೋಟರಿ ಅಧ್ಯಕ್ಷೆ ಶ್ರೀಮತಿ ಜಯಶ್ರೀ ಕಾಮತ್ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಶಿಸ್ತು, ಸಂಯಮ ಬೆಳೆಸಿಕೊಂಡು ಆತ್ಮವಿಶ್ವಾಸ ಹೊಂದಬೇಕೆಂದರು. ಶ್ರೀ ಎಸ್.ಎಸ್. ಭಟ್ (ಜಿಲ್ಲಾ ಸ್ಥಾನಿಕ ಆಯುಕ್ತರು) ಮಾತನಾಡಿ ಹೆತ್ತವರಿಗೆ ಕೀರ್ತಿ ತರುವ ಮಕ್ಕಳಾಗಿ ಎಂದು ಕರೆನೀಡಿದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಡಾ|| ಜಿ.ಜಿ. ಸಭಾಹಿತ್ ಅಧ್ಯಕ್ಷತೆ ವಹಿಸಿದ್ದರು. ಡಯಟ್ ಪ್ರಾಚಾರ್ಯ ಶ್ರೀ ಎಸ್.ಟಿ. ವೈದ್ಯ ಹಾಗೂ ರೋಟರಿ ಅಧ್ಯಕ್ಷೆ ಶ್ರೀಮತಿ ಜಯಶ್ರೀ ಕಾಮತ್ ಅವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಶ್ರೀ ಜಿ.ಆರ್.

ಮಡಿವಾಳ್ ಶಿಬಿರದ ವರದಿ ವಾಚಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ಸ್ವಾಗತಿಸಿದರು. ಸ್ಟೆಲ್ಲಾ ಡಿ. ಲೀಮಾ ಗೈಡ್ ಶಿಬಿರದ ನಾಯಕಿಯಾಗಿ ಉಪಸ್ಥಿತರಿದ್ದರು. ಸಹಾಯಕ ರಾಜ್ಯ ಸಂಘಟನಾ ಆಯುಕ್ತೆ ಶ್ರೀಮತಿ ಭಾರತಿ ಡಯಾಸ್ ವಂದಿಸಿದರು.

**********

ದಿನಾಂಕ 22-08-2013 ರಂದು ಮಾರ್ಥೋಮಾ ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್‌ಗಳು ಪರಿಸರ ದಿನಾಚರಣೆಯನ್ನು ಆಚರಿಸಿದರು. ಜೊತೆಗೆ 2013-14ನೇ ಸಾಲಿನ ಕಾರ್ಯ ಚಟುವಟಿಕೆಗಳ ಪ್ರಾರಂಭೋತ್ಸವ ನಡೆಯಿತು. ಮುಖ್ಯ ಅತಿಥಿಗಳಾಗಿ ಮಾರ್ಥೋಮಾ ಸಿ.ಬಿ.ಎಸ್.ಇ. ಶಾಲೆಯ ಮುಖ್ಯ ಅಧ್ಯಾಪಕಿಯಾದ ಶ್ರೀಮತಿ ಮಿನೀ ಮಿಸ್, ಶಾಲೆಯ ಖಜಾಂಚಿಗಳಾದ ಶ್ರೀ ಕೆ.ಜಿ. ವರ್ಗೀಸ್, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ಆಗಮಿಸಿದ್ದರು. ಇದರ ಅಧ್ಯಕ್ಷತೆಯನ್ನು ಪ್ರಾಂಶುಪಾಲರಾದ ಫಾದರ್ ಜೋಜಿ ಥಾಮಸ್ ರವರು ವಹಿಸಿದ್ದರು. ಗಿಡ ನೆಡುವುದರ ಮೂಲಕ 2013-14ನೇ ಸಾಲಿನ ಚಟುವಟಿಕೆಗಳನ್ನು ಅತಿಥಿಗಳು ಉದ್ಘಾಟಿಸಿದರು. ಅತಿಥಿಗಳಾದ ಶ್ರೀ ಕೆ.ಸಿ. ವರ್ಗೀಸ್ ಮಾತನಾಡುತ್ತಾ ಪರಿಸರದ ರಕ್ಷಣೆ ಮಾಡಬೇಕೆಂದು ಕರೆಕೊಟ್ಟು, ಶುಭ ಕೋರಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಕಬ್ಸ್-ಬುಲ್‌ಬುಲ್ಸ್ ಶಾಲೆಯಲ್ಲಿ ನಡೆಸುತ್ತಿರುವ ಚಟುವಟಿಕೆಗಳ ಬಗ್ಗೆ ಶ್ಲಾಘಿಸಿದರು. ಅಧ್ಯಕ್ಷತೆಯನ್ನು ವಹಿಸಿದ ಪ್ರಾಂಶುಪಾಲರಾದ ಫಾದರ್ ಜೋಜಿ ಥಾಮಸ್ ರವರು ಮಾತನಾಡುತ್ತ ಜಗತ್ತಿನ ಉಳಿವಿಗಾಗಿ ಪರಿಸರವನ್ನು ಕಾಯ್ದುಕೊಂಡು ಬರಲು ತಿಳಿಸಿದರು. ಸ್ಕೌಟ್ ರಾಕೇಶ್ ಸ್ವಾಗತಿಸಿದರೆ, ಗೈಡ್ ಶ್ರೇಯಾ ವಂದಿಸಿದಳು. ಈ ಸಭೆಯಲ್ಲಿ ಸ್ಕೌಟ್ ಮಾಸ್ಟರ್ ಶ್ರೀ ನರೇಶ್ ನಾಯ್ಕ, ಕಬ್ ಮಾಸ್ಟರ್, ಶ್ರೀ ಮುರುಳಿ ಜೋಸ್, ಗೈಡ್ ಕ್ಯಾಪ್ಟನ್ ಶ್ರೀಮತಿ ಸರಿತಾ ಹಾಗೂ ಶ್ರೀಮತಿ ನೇತ್ರಾವತಿ ಇವರು ಉಪಸ್ಥಿತರಿದ್ದರು. ಸ್ಕೌಟ್ ಥೌಸಿತ್ ಕಾರ್ಯಕ್ರಮವನ್ನು ನಿರೂಪಿಸಿದರು.

## ಚಿಕ್ಕಮಗಳೂರು

ದಿನಾಂಕ 04-09-2013 ರಂದು ನಡೆದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶದಲ್ಲಿ ಚಿಕ್ಕಮಗಳೂರು ತಾಲ್ಲೋಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ರಾಜೇಗೌಡರು ಮುಖ್ಯ ಅತಿಥಿಯಾಗಿ ಭಾಗವಹಿಸಿ ಮಾತನಾಡಿ. ಈ ಸಮಾವೇಶವು ಹಿಮಾಲಯ ವೃಕ್ಷಮಣಿದಾರಕರಿಗಾಗಿ ಏರ್ಪಡಿಸಿದ್ದು, ಅವರು ತಮ್ಮ ಜವಾಬ್ದಾರಿಗಳನ್ನು ಅರಿತು ಶಾಲೆಗಳಲ್ಲಿ ದಳವನ್ನು ನಡೆಸುವುದೆಂದು ನುಡಿದರು.

ಶ್ರೀ ಎಂ.ಎನ್. ಷಡಕ್ಷರಿ ಜಿಲ್ಲಾ ಮುಖ್ಯ ಆಯುಕ್ತರು ಈ ಸಮಾವೇಶದಲ್ಲಿ ಭಾಗವಹಿಸಿ ಸಮಾವೇಶವು ಯಶಸ್ವಿಯಾಗಲೆಂದು ಹಾರೈಸುವುದರ ಮೂಲಕ ಸಮಾಫೇಶವನ್ನು ಉದ್ಘಾಟಿಸಿದರು. ಶ್ರೀ ಕಟ್ಟಿಮನಿ, ಸರ್ಕಾರಿ ಪದವಿ ಪೂರ್ವಕಾಲೇಜಿನ ಚಿತ್ರಕಲಾ ಶಿಕ್ಷಕರು, ಶ್ರೀ ಶಶಿಧರ್‌ರಾವ್ ಜಿಲ್ಲಾ ಕಾರ್ಯದರ್ಶಿ ಡಿ.ಟಿ.ಸಿ.(ಎಸ್.) ಶ್ರೀಮತಿ ಸಂಧ್ಯಾರಾಣಿ, ಶ್ರೀ ಎಲ್.ಟಿ. ಲೋಕೇಶ್, ಪ್ರಬಾರಿ ರಾಜ್ಯ ಸಂಘಟನಾ ಆಯುಕ್ತರು(ಸ್ಕೌ) ಉಪಸ್ಥಿತರಿದ್ದರು. ಈ ಸಮಾವೇಶದಲ್ಲಿ ಜಿಲ್ಲಾದ್ಯಂತ 20 ಹಿಮಾಲಯ ವೃಕ್ಷಮಣಿದಾರಕರು ಭಾಗವಹಿಸಿದ್ದರು.

ಈ ಸಮಾವೇಶದದಲ್ಲಿ ವಿಶೇಷವಾಗಿ ಕು॥ ರೂಹಿ, ಮಲೆನಾಡು ವಿದ್ಯಾ ಸಂಸ್ಥೆಯಿಂದ ಆಗಮಿಸಿ "ಟೈಮ್ ಮೇನೇಜ್‌ಮೆಂಟ್" ನ ಬಗ್ಗೆ ತಿಳಿಸಿದರು.

## ಶಿವಮೊಗ್ಗ

ದಿನಾಂಕ : 12-08-2013 ರಿಂದ 14-08-2013 ರ ವರೆಗೆ ಭದ್ರಾವತಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ ಮತ್ತು ರೇಂಜರ್‌ಗಳಿಗಾಗಿ ದೇಶಭಕ್ತಿ ಗೀತೆಗಳ ಗಾಯನ ಕಾರ್ಯಾಗಾರ ಏರ್ಪಡಿಸಲಾಗಿತ್ತು. ಈ ಕಾರ್ಯಾಗಾರದಲ್ಲಿ ಆಕಾಶವಾಣಿಯ ಕಲಾವಿದರಾದ ಶ್ರೀ ನಾವೆಲ್ ಸುಧಾ ಮುಕುಂದ್ ಮತ್ತು ಶ್ರೀಮತಿ ರಾಧಾಕೃಷ್ಣ ಭಟ್, ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು.

ಶ್ರೀ ಎಸ್. ನಾರಾಯಣಪ್ಪ, ಅಧ್ಯಕ್ಷರು, ಭದ್ರಾವತಿ ಸ್ಥಳೀಯ ಸಂಸ್ಥೆ ಶ್ರೀ ಜಿ.ಟಿ. ಗುಣಾಲಗಪ್ಪ, ಕಾರ್ಯದರ್ಶಿ, ಭದ್ರಾವತಿ ಸ್ಥಳೀಯ ಸಂಸ್ಥೆ ಮತ್ತು ಪ್ರೊ॥ ಎಲ್. ಮುರಳೀಧರ್ ಪ್ರಾಂಶುಪಾಲರು ಉಪಸ್ಥಿತರಿದ್ದರು. ಕಾಲೇಜಿನ 42 ರೋವರ್-ರೇಂಜರ್‌ಗಳು ಕಾರ್ಯಾಗಾರದಲ್ಲಿ ಭಾಗವಹಿಸಿದ್ದರು.

********

ದಿನಾಂಕ 16-08-2013 ರಂದು ಭದ್ರಾವತಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಬಿ.ಕಾಂ, ಪ್ರಥಮ ವರ್ಷದ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ರೋವರ್ಸ್, ರೇಂಜರ್ಸ್ ಬಗ್ಗೆ ಮಾಹಿತಿ ನೀಡಲಾಯಿತು. ಪ್ರೊ॥ ಎಂ. ಚಂದ್ರಪ್ಪ, ಪ್ರಾಂಶುಪಾಲರು, ಅಧ್ಯಕ್ಷತೆ ವಹಿಸಿದ್ದರು. ಶ್ರೀ ವಾಸ್ಯ ನಾಯಕ, ರೋವರ್ ಲೀಡರ್ ಮತ್ತು ಶ್ರೀಮತಿ ನಿವೇದಿತಾ ರೇಂಜರ್ ಲೀಡರ್ ರೋವರಿಂಗ್, ರೇಂಜರಿಂಗ್ ಬಗ್ಗೆ ಮಾಹಿತಿ ನೀಡಿದರು.

## ಮೈಸೂರು

ದಿನಾಂಕ 22 ರಿಂದ 24ನೇ ಆಗಸ್ಟ್ 2013 ರ ವರೆಗೆ ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ ಮತ್ತು ಗೈಡ್ ಕೇಂದ್ರ ಕಛೇರಿಯಲ್ಲಿ 'ರೋವರ್ಸ್ ಮತ್ತು ರೇಂಜರ್ಸ್ ಪರಿಚಯಾತ್ಮಕ ಶಿಬಿರ ನಡೆಯಿತು. 114 ರೇಂಜರ್ಸ್ ಮತ್ತು 54 ರೋವರ್ಸ್ ಈ ಶಿಬಿರದಲ್ಲಿ ಭಾಗವಹಿಸಿದ್ದರು. ಶ್ರೀ ಬಾಲಕೃಷ್ಣ ಡಿ. ರೋವರ್ಸ್ ವಿಭಾಗಕ್ಕೆ ಶ್ರೀಮತಿ ಮಾಲತಿ ರೇಂಜರ್ಸ್ ವಿಭಾಗಕ್ಕೆ ಮುಖ್ಯಸ್ಥರಾಗಿದ್ದರು. ದಿನಾಂಕ 22-08-2013 ರಂದು ಶ್ರೀ ಪಿ. ವಿಶ್ವನಾಥ್ ಜಿಲ್ಲಾ ಮುಖ್ಯ ಆಯುಕ್ತರು ಶಿಬಿರವನ್ನು ಉದ್ಘಾಟಿಸಿದರು. ಶ್ರೀಮತಿ ರಾಮಲತಾ, ಜಂಟಿ ರಾಜ್ಯ ಕಾರ್ಯದರ್ಶಿಗಳು ಭಾರತ್ ಸ್ಕೌಟ್ ಮತ್ತು ಗೈಡ್ ಕರ್ನಾಟಕ ಇವರು ಶಿಬಿರಕ್ಕೆ ಭೇಟಿ ನೀಡಿದ್ದರು. ದಿನಾಂಕ 24-08-2013 ರಂದು ಸರ್ವಧರ್ಮ ಪ್ರಾರ್ಥನೆ ನಡೆಯಿತು. ಅಂದು ಸಂಜೆ ಶಿಬಿರದ ಮುಕ್ತಾಯ ಸಮಾರಂಭ ನಡೆಯಿತು. ಶ್ರೀ ಪ್ರಭಾಕರ್, ಪ್ರಾದೇಶಿಕ ಜಂಟಿ ನಿರ್ದೇಶಕರು. ಕಾಲೇಜು ಶಿಕ್ಷಣ ಇಲಾಖೆ, ಮೈಸೂರು ಮುಖ್ಯ ಅತಿಥಿಗಳಾಗಿದ್ದರು. ಶ್ರೀ ಪಿ. ವಿಶ್ವನಾಥ್ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ರಾಮಪ್ರಸಾದ್ ಹಾಗೂ ಶ್ರೀಮತಿ ಸುಜಯ ಜಿಲ್ಲಾ ಜಂಟಿ ಕಾರ್ಯದರ್ಶಿಗಳು ಶಿಬಿರದ ಮೇಲ್ವಿಚಾರಕರಾಗಿದ್ದರು.

**********

ದಿನಾಂಕ 22-08-2013 ನೇ ಗುರುವಾರದಂದು, ಇತ್ತೀಚೆಗೆ ನಿಧನರಾದ ಶ್ರೀಮತಿ ಶಾಂತಾ ಗಿರಿಯಣ್ಣನವರಿಗೆ ಶ್ರದ್ಧಾಂಜಲಿ ಅರ್ಪಣೆ ಸಭೆ ನಡೆಯಿತು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಕಮಲಾರಾಮನ್, ಡಿ.ಸಿ.,(ಜಿ) ಶ್ರೀ ಅಬ್ದುಲ್ ಜಮೀಲ್ ಡಿ.ಸಿ.,(ಎಸ್.), ಶ್ರೀಮತಿ ರಾಜಮ್ಮ, ಕೇಂದ್ರ ಸ್ಥಾನಿಕ ಆಯುಕ್ತರು(ಗೈ), ಶ್ರೀ ಚನ್ನಬಸಪ್ಪ ಕೇಂದ್ರ ಸ್ಥಾನಿಕ ಆಯುಕ್ತರು(ಸ್ಕೌ)

ಎ.ಡಿ.ಸಿ. ಗಳಾದ ಶ್ರೀ ಅಜಯ್ ಕುಮಾರ್ ಜೈನ್, ಶ್ರೀ ಸುರೇಶ್ ಕುಮಾರ್ ಶ್ರೀಮತಿ ಪ್ರೇಮಲತಾ ಶ್ರೀ ರಾಮಪ್ರಸಾದ್, ಡಿ.ಓ.ಸಿ., ಶ್ರೀಮತಿ ಸುಜಯ ರವರು ಭಾಗವಹಿಸಿದ್ದರು.

## ರಾಯಚೂರು

ದಿನಾಂಕ : 15-08-2013 ರಂದು 67ನೇ ಸ್ವಾತಂತ್ರೋತ್ಸವ ದಿನಾಚರಣೆಯಲ್ಲಿ ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಧ್ವಜಾರೋಹಣವನ್ನು ಮಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಸದಸ್ಯರು ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಉಪಸ್ಥಿತರಿದ್ದರು. ನಂತರ ಜಿಲ್ಲಾ ಮಹಾತ್ಮಾಗಾಂಧಿ ಕ್ರೀಡಾಂಗಣದಲ್ಲಿ ನಡೆದ ಸಾಮೂಹಿಕ ಧ್ವಜಾರೋಹಣದ ಪಥಸಂಚಲನದಲ್ಲಿ 3 ಸ್ಕೌಟ್ಸ್ ತಂಡಗಳು, 3 ಗೈಡ್ಸ್ ತಂಡಗಳು, 2 ರೇಂಜರ್ಸ್ ತಂಡಗಳು ಭಾಗವಹಿಸಿದ್ದವು. ಪಥಸಂಚಲನದಸ್ಪರ್ಧೆಯಲ್ಲಿ ಸೆಂಟ್ ಮೇರಿ ಕಾನ್ವೆಂಟ್ ಶಾಲೆಯ ಗೈಡ್ಸ್ ತಂಡ, ಕಾಕತೀಯ ಶಾಲೆಯ ಸ್ಕೌಟ್ಸ್ ತಂಡ ಹಾಗೂ ಸ.ಪ.ಪೂ. ಕಾಲೇಜು ಮುನ್ನೂರು ವಾಡಿಯ ರೇಂಜರ್ ತಂಡಗಳು ತೃತೀಯ ಸ್ಥಾನ ಪಡೆದು, ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರು ಬಹುಮಾನ ನೀಡಿದರು.

********

ದಿನಾಂಕ 15-08-2013 ರಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರೌಢಶಾಲೆ ಆತ್ಕೂರು, ಸಂಯುಕ್ತಾಶ್ರಯದಲ್ಲಿ 67ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲಾಯಿತು. ಎಸ್.ಡಿ.ಎಂ.ಸಿ. ಅಧ್ಯಕ್ಷರು ಧ್ವಜಾರೋಹಣ ನೆರವೇರಿಸಿದರು. ಎಸ್.ಡಿ.ಎಂ.ಸಿ. ಸದಸ್ಯರಾದ ಶ್ರೀ ಮಂಜುನಾಥ ರವರು ಕಬ್‌ಗಳನ್ನು ಹಾಗೂ ಕಬ್ ಮಾಸ್ಟರರನ್ನು ಅಭಿನಂದಿಸಿದರು. ಗ್ರಾಮ ಪಂಚಾಯ್ತಿ ಸದಸ್ಯರಾದ ಶ್ರೀ ಜೆಂಗ್ಲೆಪ್ಪ ಮತ್ತು ಮಾರೆಪ್ಪ ರವರು ಕಬ್ ಚಟುವಟಿಕೆಗಳಿಗೆ ಬಳಸಿಕೊಳ್ಳಲು ಧನ ಸಹಾಯವನ್ನು ನೀಡಿದರು.

***********

ದಿನಾಂಕ 31-08-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆ ಲಿಂಗಸುಗೂರು ಇವರುಗಳ ಸಂಯುಕ್ತಾಶ್ರಯದಲ್ಲಿ ಶಾಸಕರ ಸರಕಾರಿ ಮಾದರಿಯ ಶಾಲೆ ಲಿಂಗಸುಗೂರಿನಲ್ಲಿ ಆಯೋಜಿಸಲಾಗಿದ್ದ ತಾಲ್ಲೂಕ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಉದ್ಘಾಟಿಸಿ ಮಾತನಾಡಿದ ತಾಲೂಕ ದೈಹಿಕ ವಿಷಯ ಪರಿವೀಕ್ಷಕರಾದ ಶ್ರೀ ಬಸವರಾಜ ಮೂಲಿಮನಿ, ಸ್ಕೌಟ್ಸ್ ಮತ್ತು ಗೈಡ್ಸ್‌ನಿಂದ ವಿದ್ಯಾರ್ಥಿಗಳಲ್ಲಿ ಶಿಸ್ತು, ಸಂಯಮ, ದೇಶಪ್ರೇಮ, ಸಮಯಪ್ರಜ್ಞೆ, ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ ಎಂದರು.

ಮುಖ್ಯ ಅತಿಥಿಗಳಾಗಿ ಶ್ರೀ ಪ್ರಕಾಶ, ಎಸ್.ಡಿ.ಎಮ್.ಸಿ., ಶ್ರೀ ಕೃಷ್ಣಪ್ಪ ಅಧ್ಯಕ್ಷರು, ಪ್ರೌಢಶಾಲೆ ಮುಖ್ಯೋಪಾಧ್ಯಾಯರ ಸಂಘ, ಶ್ರೀ ಸಾಬಣ್ಣ ವಗ್ಗರ, ಶ್ರೀ ಶಿವಪುತ್ರಪ್ಪ, ಶ್ರೀ ಬೆಳ್ಳಿಗನೂರು, ಪ್ರಧಾನ ಕಾರ್ಯದರ್ಶಿ ಗಳು, ಪ್ರಾ.ಶಾ.ಸ. ಶಿಕ್ಷಕರ ಸಂಘ, ಲಿಂಗಸಗೂರು ಇವರು ಮಾತನಾಡಿ, ತಾಲ್ಲೂಕಿನ ಪ್ರತಿಯೊಂದು ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳನ್ನು ಪ್ರಾರಂಭಿಸಲು ಬೇಕಾಗುವ ಸಹಾಯ ಸಹಕಾರಗಳನ್ನು ನೀಡಲಾಗುತ್ತದೆ ಎಂದು ಹೇಳಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ, ಶ್ರೀ ಜಿ.ವಿ. ಕೆಂಚನಗುಡ್ಡ ಜಿಲ್ಲಾ ಸಹಾಯಕ ಆಯುಕ್ತರು (ಸ್ಕೌ) ಸಂಸ್ಥೆಯ ಬೆಳವಣಿಗೆಗೆ ಸ್ಕೌಟರ್ಸ್ ಗೈಡರ್ಸ್

ಪ್ರಾಮಾಣಿಕ ಪ್ರಯತ್ನ ಮಾಡುವಂತೆ ಮನವಿ ಮಾಡಿದರು. ಶ್ರೀ ರಾವುತ್ ರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ಸುಧಾ ಜಿ. ಡಿ.ಓ.ಸಿ.(ಗೈ), ಪಂಚಾಕ್ಷರಯ್ಯ ಖಜಾಂಚಿಗಳು ವೇದಿಕೆಯಲ್ಲಿದ್ದರು. ಶ್ರೀ ಶರಣಬಸವ ಸ್ವಾಗತಿಸಿದರು. ಶ್ರೀ ಶಿವಪುತ್ರಪ್ಪ ನಿರೂಪಿಸಿದರು. ಶಶಿಕಾಂತ್ ದೇಸಾಯಿ ವಂದಿಸಿದರು. ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಹಾಗೂ ತಾಲೂಕಿನ ಸ್ಕೌಟರ್ಸ್ ಗೈಡರ್ಸ್ ಭಾಗವಹಿಸಿದರು.

## ಕೊಪ್ಪಳ

ದಿನಾಂಕ 20-08-2013 ರಂದು ಜಿಲ್ಲಾಡಳಿತದ ವತಿಯಿಂದ ದಿ॥ ದೇವರಾಜ ಅರಸು ರವರ 98ನೇ ಜನ್ಮ ದಿನಾಚರಣೆಯ ಮೆರವಣಿಗೆಯಲ್ಲಿ ಸರಕಾರಿ ಪದವಿಪೂರ್ವ ಕಾಲೇಜಿನ ಪ್ರೌಢಶಾಲೆಯ ಸ್ಕೌಟ್ ಮಕ್ಕಳು ಭಾಗವಹಿಸಿದರು. ಇದರ ನೇತೃತ್ವವನ್ನು ಸ್ಕೌಟ್-ಮಾಸ್ಟರ್ ಶ್ರೀ ಎಸ್.ಎನ್. ಪಾಟೀಲ ಹಾಗೂ ಎ.ಎಸ್.ಓ.ಸಿ., (ಎಸ್) ಶ್ರೀ ಎ.ಎಸ್.ಶಿವುಕುಮಾರ ವಹಿಸಿದ್ದರು.

********

ದಿನಾಂಕ : 24-08-2013 ರಿಂದ 26-08-2013 ವರೆಗೆ ನಡೆದ ಕೊಪ್ಪಳ ಉತ್ಸವದಲ್ಲಿ ಸರಕಾರಿ ಪದವಿ ಪೂರ್ವ ಕಾಲೇಜಿನ ಪ್ರೌಢಶಾಲೆಯ ಸ್ಕೌಟ್‌ಗಳು ಸೇವೆಯನ್ನು ಮಾಡಿದರು ಹಾಗು 3 ದಿನಗಳ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು.

************

ದಿನಾಂಕ 06-09-2013 ರಂದು ಕೊಪ್ಪಳ ತಾಲ್ಲೂಕ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಶಾರದಾ ಪ್ರೌಢಶಾಲೆಯಲ್ಲಿ ಏರ್ಪಡಿಸಲಾಗಿತ್ತು. ಜಿಲ್ಲಾ ಪಂಚಾಯತ ಅಧ್ಯಕ್ಷರಾದ ಶ್ರೀ ಜನಾರ್ಧನ ಹುಲಿಗಿ ಉದ್ಘಾಟಿಸಿ ಮಾತನಾಡುತ್ತಾ ಜಿಲ್ಲೆಯ ಪ್ರತಿಯೊಂದು ಶಾಲೆಗಳಲ್ಲಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಕಡ್ಡಾಯವಾಗಿ ಘಟಕಗಳನ್ನು ತೆರೆಯಬೇಕು ಎಂದು ಹೇಳಿದರು ಹಾಗೂ ಕೊಪ್ಪಳ ಜಿಲ್ಲೆಯ ತರಬೇತಿ ಕೇಂದ್ರಕ್ಕೆ 20 ಲಕ್ಷ ಅನುದಾನದಲ್ಲಿ ಕಟ್ಟಡ ಮತ್ತು ಎನ್.ಆರ್.ಇ.ಜಿ. ಯಲ್ಲಿ ಕಾಂಪೌಂಡ್ ನಿರ್ಮಾಣವನ್ನು ಮಾಡಿ ಕೊಡಲಾಗುವುದು ಎಂದರು. ತಾಲ್ಲೂಕ ಪಂಚಾಯತಿ ಅಧ್ಯಕ್ಷರಾದ ಶ್ರೀ ದೇವಪ್ಪ ಮೆಕಾಳಿಯವರು ಸ್ಕೌಟ್ಸ್-ಗೈಡ್ಸ್ ಅಭಿವೃದ್ಧಿಗೆ ಸಹಕಾರ ನೀಡುವುದಾಗಿ ಹೇಳಿದರು. ಸ್ಥಳೀಯ ಸಂಸ್ಥೆ ಅಧ್ಯಕ್ಷರು ಶ್ರೀ ಮಂಜುನಾಥ ಗೇಂಡಬಾಳ, ಸಹಕಾರ್ಯದರ್ಶಿ ಶ್ರೀ ಜಯರಾಜ ಬೂಸದ್, ಜಿಲ್ಲಾ ತರಬೇತಿ ಆಯುಕ್ತರು ಶ್ರೀ ಯರ್ರಣ್ಣಾ, ಶಾರದಾ ಪ್ರೌಢಶಾಲೆಯ ಅಧ್ಯಕ್ಷರು ಶ್ರೀ ಮಲ್ಲಿಕಾರ್ಜುನ, ಸಹಾಯಕ ರಾಜ್ಯಸಂಘಟನಾ ಆಯುಕ್ತರು ಶ್ರೀ ಎ. ಶಿವುಕುಮಾರ ಶ್ರೀ ಶಿವಬಸವನಗೌಡ, ಸ್ಕೌಟ್ ಮಾಸ್ಟರ್ ಭಾಗವಹಿಸಿದ್ದರು.

************

ದಿನಾಂಕ 24-08-2013 ರಂದು ನಂದೀಶ್ವರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಂದು ದಿನದ ಕಲಿಕಾ ತರಬೇತಿ ಹಮ್ಮಿಕೊಳ್ಳಲಾಗಿತ್ತು. ಪ್ರವೇಶ್, ಪ್ರಥಮ ಸೋಪಾನ, ದ್ವಿತೀಯ ಸೋಪಾನ ಮತ್ತು ತೃತೀಯ ಸೋಪಾನ ದ ವರೆಗಿನ ವಿವಿಧ ವಿಷಯದ ಬಗ್ಗೆ ತರಬೇತಿ ನೀಡಲಾಯಿತು.

***********

ದಿನಾಂಕ 29-08-2013 ರಂದು ಲಯನ್ಸ್ ಸ್ವಾಮಿ ವಿವೇಕಾನಂದ ಆಂಗ್ಲ ಮಾಧ್ಯಮ ಪ್ರೌಢಶಾಲೆಯ ಸ್ಕೌಟ್ಸ್‌ಗಳು ಷಟಲ್ ಬ್ಯಾಟ್‌ಮಿಂಟನ್ ಮತ್ತು ಚೆಸ್ ವಿಭಾಗಗಳಲ್ಲಿ ರಾಜ್ಯಕ್ಕೆ ಆಯ್ಕೆ ಯಾಗಿರುತ್ತಾರೆ.

**********

ದಿನಾಂಕ 28-08-2013 ರಂದು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕು ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಗುರುಭವನದಲ್ಲಿ ನಡೆಸಲಾಯಿತು. ಅಧ್ಯಕ್ಷತೆಯನ್ನು ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ ಡಿ.ಸಿ.(ಎಸ್.) ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶಿಕ್ಷಣ ಸಂಯೋಜಕರಾದ ಶ್ರೀ ಶ್ರೀಧರ ಕುಲಕರ್ಣಿ ಭಾಗವಹಿಸಿದ್ದರು. 40 ಸ್ಕೌಟರ್ಸ್ ಗೈಡರ್ಸ್ ಸಮಾವೇಶದಲ್ಲಿ ಭಾಗವಹಿಸಿದ್ದರು.

************

ದಿನಾಂಕ 12-09-2013 ರಂದು ಒಂದು ದಿನದ ಪರಿಚಯಾತ್ಮಕ ಶಿಬಿರವನ್ನು ಗುರುಭವನ ಗಂಗಾವತಿಯಲ್ಲಿ ನಡೆಸಲಾಯಿತು. ಈ ಶಿಬಿರವನ್ನು ಸ್ಥಳೀಯ ಸಂಸ್ಥೆ ಗಂಗಾವತಿ ಆಶ್ರಯದಲ್ಲಿ ನಡೆಸಲಾಯಿತು.

*************

ದಿನಾಂಕ 07-09-2013 ರಂದು ಕೊಪ್ಪಳ ಸ್ಥಳೀಯ ಸಂಸ್ಥೆ ವತಿಯಿಂದ ಒಂದು ದಿನದ ಪರಿಚಯಾತ್ಮಕ ಶಿಬಿರವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದಲ್ಲಿ ನಡೆಸಲಾಯಿತು.

## ಬೀದರ್

ಡಾ. ಸರ್ವಪಲ್ಲಿ ರಾಧಾಕೃಷ್ಣ ರವರ ಜನ್ಮದಿನಾಚರಣೆಯ ನಿಮಿತ್ತ ಬೀದರ ಜಿಲ್ಲಾ ಮಟ್ಟದ 'ಶಿಕ್ಷಕರ ದಿನಾಚರಣೆ' ಮತ್ತು 'ಜಿಲ್ಲಾ ಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ' ಪ್ರಧಾನ ಸಮಾರಂಭವು ಸೆಪ್ಟಂಬರ್ 5 ರಂದು ಬೀದರ ಜಿಲ್ಲೆಯ ಹುಮನಾಬಾದ ತಾಲ್ಲೂಕಿನ ಮಾಣಿಕ ನಗರದ "ಸಿದ್ಧರಾಜ ಭವನ" ಮಾಣಿಕಪ್ರಭು ದೇವಾಲಯದಲ್ಲಿ ಜರುಗಿತು. ಕಾರ್ಯಕ್ರಮದ ದಿವ್ಯಸಾನ್ನಿಧ್ಯವನ್ನು ಡಾ. ಜ್ಞಾನರಾಜ ಪ್ರಭುಗಳು ವಹಿಸಿದ್ದರು. ಕಾರ್ಯಕ್ರಮದ ಘನ ಅಧ್ಯಕ್ಷತೆಯನ್ನು ಹುಮನಾಬಾದ್ ಶಾಸಕರಾದ ಶ್ರೀ ರಾಜಶೇಖರ ಪಾಟೀಲ್ ವಹಿಸಿದ್ದರು. ಸಂಸದರಾದ ಶ್ರೀ ಎನ್. ಧರ್ಮಸಿಂಗ್, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಹೆಚ್.ಆರ್. ಬಸಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಬಾಬುಮಿಯ್ಯಾ ಜಿಲ್ಲೆಯ ಜನಮೆಚ್ಚಿದ ಶಿಕ್ಷಕರು ಹಾಗೂ ಮಾಣಿಕ ಪಬ್ಲಿಕ್ ಶಾಲೆಯ ಸ್ಕೌಟ್ಸ್-ಗೈಡ್ಸ್, ಸ್ಕೌಟರ್ಸ್-ಗೈಡರ್ಸ್ ಪಾಲ್ಗೊಂಡಿದ್ದರು.

*************

ದಿನಾಂಕ 04-05-2013 ರಂದು ಬೀದರ ನಗರದ ಯುನಿಕ್ ಪಬ್ಲಿಕ್ ಶಾಲೆಯಲ್ಲಿ ಶಿಕ್ಷಕರ ದಿನಾಚರಣೆಯ ಅಂಗವಾಗಿ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಾಗಿ 'ಸ್ಕೌಟಿಂಗ್-ನೇಚರ್' ಸ್ಕೌಟ್-ಗೈಡ್ ಪರಿಸರ ಪ್ರೇಮಿ' ವಿಷಯದ ಬಗ್ಗೆ ಚಿತ್ರಕಲಾ ಸ್ಪರ್ಧೆ ಏರ್ಪಡಿಸಲಾಯಿತು. ಸ್ಪರ್ಧೆಯಲ್ಲಿ ಶಾಲೆಯ ಎಲ್ಲಾ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

************

ದಿನಾಂಕ 05-09-2013 ರಂದು ಡಾ. ಸರ್ವಪಲ್ಲಿ ರಾಧಾಕೃಷ್ಣನ್ ರವರ ಜನ್ಮದಿನಾಚರಣೆಯ ಅಂಗವಾಗಿ ಜರುಗಿದ ಶಿಕ್ಷಕರ ದಿನಾಚರಣೆಯು ಪ್ರಯುಕ್ತ 'ರಂಗಮಂದಿರ'ದಲ್ಲಿ ತಾಲ್ಲೂಕು ಮಟ್ಟದ ಉತ್ತಮ

ಶಿಕ್ಷಣ ಪ್ರಶಸ್ತಿ ಪ್ರಧಾನ ಕಾರ್ಯಕ್ರಮ ಹಮ್ಮಿಕೊಂಡಿದ್ದು, ಕಾರ್ಯಕ್ರಮದಲ್ಲಿ ನಗರದ ಶಾಲೆಗಳ 56 ಸ್ಕೌಟ್ಸ್ 12 ಗೈಡ್ಸ್ ಸೇವೆ ಸಲ್ಲಿಸಿದರು.

## ಹಾಸನ

ದಿನಾಂಕ : 13-09-2013 ರಿಂದ 15-09-2013 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಹಾಸನ ಜಿಲ್ಲಾ ಸ್ಕೌಟ್ ಭವನದಲ್ಲಿ ಜಿಲ್ಲಾ ಮಟ್ಟದ ರೋವರ್ಸ್, ರೇಂಜರ್ಸ್‌ಗಳ ಪ್ರವೀಣ್ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರದಲ್ಲಿ 128 ರೋವರ್ಸ್‌ಗಳು 60 ರೇಂಜರ್ಸ್‌ಗಳು ಹಾಗೂ 10 ತರಬೇತಿ ಸಿಬ್ಬಂದಿಗಳು ಭಾಗವಹಿಸಿದ್ದರು. ಶ್ರೀ ಎಂ.ಎಸ್. ಪ್ರಕಾಶ್ ಎ.ಎಲ್.ಟಿ.(ಎಸ್) ರೋವರ್ಸ್ ತರಬೇತಿ ಶಿಬಿರದ ನಾಯಕರಾಗಿದ್ದರು. ಶ್ರೀಮತಿ ಮರ್ಲಿನ್ ಬೇಗಂ. ರೇಂಜರ್ಸ್ ವಿಭಾಗದಲ್ಲಿ ನಾಯಕಿಯಾಗಿದ್ದರು. ಶಿಬಿರದಲ್ಲಿ ಪ್ರವೇಶದಿಂದ ಪ್ರವೀಣ್ ವರೆಗೆ ಸಂಬಂಧಿಸಿದ ತರಬೇತಿ ನೀಡಿ. ವಿವಿಧ ವಿಷಯಗಳ ಬಗ್ಗೆ ಬೋಧಿಸಲಾಯಿತು. ದಿನಾಂಕ 14-09-2013 ರಂದು ರೋವರ್ಸ್-ರೇಂಜರ್ಸ್‌ಗಳಿಗೆ ಹಾಸನ ಅಗ್ನಿಶಾಮಕ ದಳದ ವತಿಯಿಂದ ಬೆಂಕಿಯಿಂದ ಸುರಕ್ಷಿತ ವಿಧಾನ ಕುರಿತು ಪ್ರಾತ್ಯಕ್ಷಿಕೆ ಮಾಡಿಸಲಾಯಿತು.

ದಿನಾಂಕ 15-09-2013 ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. ಅದೇ ದಿನ ನಗರದ ಟ್ರಾಫಿಕ್ ಇನ್ಸ್‌ಫೆಕ್ಟರ್ ಶ್ರೀ ಭಾಸ್ಕರ್ ಶೆಟ್ಟಿ ರವರಿಂದ ಸಂಚಾರ ಸುರಕ್ಷತಾ ಕ್ರಮಗಳ ಕುರಿತು ನಾಗರೀಕರಲ್ಲಿ ಅರಿವು ಮೂಡಿಸುವ ಬಗ್ಗೆ ಮಾಹಿತಿ ನೀಡಿದರು. ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ಪಾರ್ಥೇನಿಯಂ ಹಾಗೂ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಆವರಣವನ್ನು ಸ್ವಚ್ಛಗೊಳಿಸಿದರು.

********

ದಿನಾಂಕ 30-08-2013 ರಂದು ಹಾಸನಾಂಬ ರೋವರ್ಸ್ ಮತ್ತು ರೇಂಜರ್ಸ್ ಘಟಕ, ಸರ್ಕಾರಿ ಕಲಾ ಕಾಲೇಜು, ಹಾಸನ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಸನ ಇವರ ವತಿಯಿಂದ ಸರ್ಕಾರಿ ಕಲಾ ಕಾಲೇಜಿನ ಆವರಣದಲ್ಲಿ ಸದ್ಭಾವನಾ ದಿನಾಚರಣೆಯನ್ನು ಆಚರಿಸಲಾಯಿತು. ಸುಮಾರು ನೂರು ರೋವರ್ಸ್, ರೇಂಜರ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಈ ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಸರ್ಕಾರಿ ಕಲಾ ಕಾಲೇಜಿನ ಪ್ರಾಂಶುಪಾಲರಾದ ಡಾ॥ ಶ್ರೀ ಐ.ಎಂ ಮೋಹನ್ ಅವರು ವಹಿಸಿದ್ದರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಕಾಂಚನಮಾಲಾ ಅವರು ಸಮಾರಂಭವನ್ನು ಉದ್ಘಾಟಿಸಿದರು. ರೋವರ ಲೀಡರಾದ ಶ್ರೀ ಉಯದ ಕುಮಾರ್ ಪ್ರತಿಜ್ಞಾ ವಿಧಿಯನ್ನು ಬೋಧಿಸಿದರು. ಕಲಾ ಕಾಲೇಜಿನ ರೋವರ್ ಚನ್ನಬಸವೇಶ್ವರ ಕಾರ್ಯಕ್ರಮ ನಿರೂಪಿಸಿದರು. ರೇಂಜರ್ ಲೀಡರಾದ ಶ್ರೀಮತಿ ಹೇಮಂತಿನಿ, ಎನ್.ಎಸ್.ಎಸ್. ಅಧಿಕಾರಿಗಳಾದ ಶ್ರೀ ರಮೇಶ್ ಸಮಾರಂಭದಲ್ಲಿ ಉಪಸ್ಥಿತರಿದ್ದರು.

## ಬೆಳಗಾವಿ

ದಿನಾಂಕ 24-08-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸ್ಕೌಟ್ ಸಭಾಭವನ ಬೆಳಗಾವಿ ಇಲ್ಲಿ ಬೆಳಗಾವಿ ನಗರ ವಲಯ ಸ್ಥಳೀಯ ಸಂಸ್ಥೆಯ ಸ್ಕೌಟರ್ಸ್ -ಗೈಡರ್ಸ್ ಶಿಕ್ಷಕರ ಸಮಾವೇಶವನ್ನು ಏರ್ಪಡಿಸಲಾಗಿತ್ತು.

ಸಮಾರಂಭವು ಶ್ರೀ ಎ.ಬಿ. ಪುಂಡಲೀಕ ಬಿ.ಇ.ಓ., ಹಾಗೂ ಎ.ಡಿ.ಸಿ.(ಸ್ಕೌಟ್) ಬೆಳಗಾವಿ ನಗರ ಇವರ ನೇತೃತ್ವದಲ್ಲಿ ಜರುಗಿತು. ಈ ಸಂದರ್ಭದಲ್ಲಿ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರಾದ ಶ್ರೀ ವಿ.ಪಿ. ಕಾಂಬಳೆ, ಉಪಸ್ಥಿತರಿದ್ದರು. ಸುಮಾರು 200 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

**********

ದಿನಾಂಕ 11-09-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸ್ಕೌಟ್ಸ್ ಸಭಾ ಭವನ ಬೆಳಗಾವಿ ಇಲ್ಲಿ ಬೆಳಗಾವಿ ಜಿಲ್ಲಾ ಮಟ್ಟದ ಹಿಮಾಲಯ ವೃಕ್ಷಮಣಿದಾರಕರ ಸಮಾವೇಶವನ್ನು ಏರ್ಪಡಿಸಲಾಗಿತ್ತು. ಸಮಾವೇಶ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಸ್. ವಾಯ್ ಹುಡೇದ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಗೈಡ್ ಜಿಲ್ಲಾ ಸಂಸ್ಥೆ ಬೆಳಗಾವಿ ವಹಿಸಿದ್ದರು. ಶ್ರೀ ವಿ.ಆರ್. ದೇವರೆಡ್ಡಿ, ಜಿಲ್ಲಾ ಖಜಾಂಚಿ, ಶ್ರೀಮತಿ ಎಲ್.ಎಸ್. ಮಂಗಿ ಜಿಲ್ಲಾ ಕಾರ್ಯದರ್ಶಿ, ಶ್ರೀ ಡಿ.ಬಿ. ಅತ್ತಾರ, ಜಿಲ್ಲಾ ಸಂಘಟಕ ಶ್ರೀ ನಾಗೇಶ ಆರ್. ಶಿವಾಪೂರ, ಎ.ಎಸ್.ಓ.ಸಿ., ಬೆಳಗಾವಿ ಇವರುಗಳು ಉಪಸ್ಥಿತರಿದ್ದರು. 20 ಜನ ವೃಕ್ಷಮಣಿದಾರಕ ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

## ದಕ್ಷಿಣ ಕನ್ನಡ

ದಿನಾಂಕ 15-08-2013 ರಂದು ಬುರುಝ್ ಆಂಗ್ಲ ಮಾಧ್ಯಮ ಪ್ರೌಢಶಾಲೆ ರಝಾನಗರ, ಮೂಡುಪಡುಕೋಡಿ, ಬಂಟ್ವಾಳ ಇಲ್ಲಿ ನಡೆದ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದಲ್ಲಿ ಶಾಲಾ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್ಸ್‌ಗಳು ಭಾಗವಹಿಸಿದ್ದರು.

***********

ದಿನಾಂಕ 23-08-2013 ರಂದು ಶ್ರೀ ಮಹಾವೀರ ಪ್ರಥಮ ದರ್ಜೆ ಕಾಲೇಜಿನಲ್ಲಿ ರೇಂಜರ್ಸ್ ಘಟಕದ ವತಿಯಿಂದ ಅರ್ಧ ದಿನದ ಕಾರ್ಯಾಗಾರವನ್ನು ಏರ್ಪಡಿಸಲಾಗಿತ್ತು. ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ಪ್ರತಿಮ್ ಕುಮಾರ್ ಎಲ್.ಟಿ. ಇವರು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ಕಾಲೇಜಿನ ಸುಮಾರು 32 ರೇಂಜರ್ಸ್‌ಗಳು ಈ ಕಾರ್ಯಗಾರ ಸದುಪಯೋಗವನ್ನು ಪಡೆದುಕೊಂಡರು.

***********

ದಿನಾಂಕ 17-08-2013 ರಂದು ಸುಳ್ಯದ ನೆಹರು ಮೆಮೋರಿಯಲ್ ಕಾಲೇಜಿನ 2013-14ನೇ ಸಾಲಿನ ರೋವರ್ಸ್ ಮತ್ತು ರೇಂಜರ್ಸ್ ಘಟಕದ ಉದ್ಘಾಟನಾ ಕಾರ್ಯಕ್ರಮ ಶನಿವಾರ ಕಾಲೇಜಿನ ಸಭಾಂಗಣದಲ್ಲಿ ನಡೆಯಿತು. ಪುತ್ತೂರು ವಿವೇಕಾನಂದ ಕಾಲೇಜಿನ ಪ್ರಾಂಶುಪಾಲರಾದ ಡಾ. ಮಾಧವ ಭಟ್ ಕಾರ್ಯಕ್ರಮವನ್ನು ಉದ್ಘಾಟಿಸಿ ಶುಭಾಶಂಸನಗೈದರು. ಕಾಲೇಜಿನ ಪ್ರಾಂಶುಪಾಲ ಡಾ. ಪ್ರಭಾಕರ ಶಿಶಿಲರು ಅಧ್ಯಕ್ಷತೆ ವಹಿಸಿದ್ದರು. ಸುಳ್ಯದ ಸ್ಥಳೀಯ ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಅಧ್ಯಕ್ಷ ಶ್ರೀ ಬಾಪು ಸಾಹೇಬ್ ಮತ್ತು ನೆಹರು ಮೆಮೋರಿಯಲ್ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲೆ ಶ್ರೀಮತಿ ಮಮತಾ ಕೆ. ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು.

***********

ದಿನಾಂಕ 31-08-2013 ರಿಂದ 02-09-2013 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಮಟ್ಟದ ರೋವರ್-ರೇಂಜರ್ಸ್ ಮೇಟ್ ತರಬೇತಿ ಶಿಬಿರವು ಜಿಲ್ಲಾ ಸ್ಕೌಟ್-ಗೈಡ್ ತರಬೇತಿ

ಕೇಂದ್ರ ಪಿಲಿಕುಳ ಇಲ್ಲಿ ಸಂಘಟಿಸಲಾಯಿತು. ಶಿಬಿರದಲ್ಲಿ ಜಿಲ್ಲೆಯ 14 ಕಾಲೇಜುಗಳಿಂದ 113 ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು. ಶ್ರೀರಾಮಶೇಷ ಶೆಟ್ಟಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಶಿಬಿರಾರ್ಥಿಗಳಿಗೆ ಶುಭ ಹಾರೈಸಿದರು. ಶ್ರೀ ಪ್ರತೀಮ್ ಕುಮಾರ್ ಎಲ್.ಟಿ.(ಸ್ಕೌಟ್ಸ್) ರೋವರ್ ಲೀಡರ್ ಶಿಬಿರದ ನಾಯಕರಾಗಿ ಕಾರ್ಯ ನಿರ್ವಹಿಸಿದ್ದರು.

****************

ದಿನಾಂಕ 24-08-2013 ರಿಂದ 26-08-2013 ರ ವರೆಗೆ ಮೂಡಬಿದ್ರೆ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಪಟಾಲಂ ನಾಯಕರ ತರಬೇತಿ ಶಿಬಿರವು ಸರ್ವೋದಯ ಪ್ರೌಢಶಾಲೆ ಕಲ್ಲಮುಂಡ್ಕೂರು, ಮೂಡಬಿದ್ರೆ ಇಲ್ಲಿ ಜರುಗಿತು. 13 ಶಾಲೆಗಳಿಂದ 91 ಸ್ಕೌಟ್ಸ್-ಗೈಡ್ಸ್, 24 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು. ಶ್ರೀ ಬಾಬು ಎಂ. ತಾಲೂಕು ಸಂಘಟಕರು ಶಿಬಿರದ ನಾಯಕರಾಗಿ ಕಾರ್ಯಕ್ರಮ ನಡೆಸಿಕೊಟ್ಟರು. ಸಮಾರೋಪ ಸಮಾರಂಭದಲ್ಲಿ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ವಿನ್ಸೆಂಟ್ ಡಿ.'ಕೋಸ್ತ ಮುಖ್ಯ ಅತಿಥಿಗಳಾಗಿ ಭಾಗವಹಿಸಿದರು. ಶ್ರೀ ವಸಂತ ಜಿಲ್ಲಾ ತರಬೇತಿ ಆಯಕ್ತರು (ಸ್ಕೌಟ್ಸ್) ಶ್ರೀ ಕೃಷ್ಣಮೂರ್ತಿ, ಕೋಶಾಧಿಕಾರಿ ಸ್ಥಳೀಯ ಸಂಸ್ಥೆ, ಶಿಬಿರವನ್ನು ವ್ಯವಸ್ಥೆಗೊಳಿಸಿದರು.

*****************

ದಿನಾಂಕ 06-09-2013 ರಿಂದ 07-09-2013 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಕ್ಷಿಣ ಕನ್ನಡ ಜಿಲ್ಲೆ, ಚತುರ್ಥ ಚರಣ ಕಬ್ಸ್ ಮತ್ತು ಹೀರಖ್ ಪಂಖ್ ಬುಲ್ ಬುಲ್ಸ್ ಪರೀಕ್ಷಾ ಶಿಬಿರ ದ.ಕ. ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಚತುರ್ಥ ಚರಣ ಕಬ್ಸ್ ವಿದ್ಯಾರ್ಥಿಗಳ ಪರೀಕ್ಷಾ ಶಿಬಿರಕ್ಕೆ ಕು. ಜೂಲಿಯಾನ ಲಸ್ರಾದೋ ಎಲ್.ಟಿ.(ಕಬ್), ಬುಲ್‌ಬುಲ್ಸ್ ಪರೀಕ್ಷಾ ಶಿಬಿರಕ್ಕೆ ಶ್ರೀಮತಿ ವಿಮಲ ಬಾಯ್ ಎ.ಎಲ್.ಟಿ.(ಬುಲ್‌ಬುಲ್ಸ್) ನಾಯಕರಾಗಿ ಭಾಗವಹಿಸಿದರು.

****************

ದಿನಾಂಕ 02-09-2013 ರಂದು ಸರಕಾರಿ ಪ್ರಥಮ ದರ್ಜೆ ಕಾಲೇಜ್ ಬಂಟ್ವಾಳದಲ್ಲಿ ರೋವರ್ ರೇಂಜರ್ಸ್ ಘಟಕದ ಉದ್ಘಾಟನಾ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಶ್ರೀ ಪ್ರತಿಮ್ ಕುಮಾರ್ ಎಲ್.ಟಿ. ಇವರು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ವೇದಿಕೆಯಲ್ಲಿ ಕಾಲೇಜಿನ ಪ್ರಾಂಶುಪಾಲೆ ಲ್ಯಾಲ ಮೇರಿ ಜಾರ್ಜ್ ಅಧ್ಯಕ್ಷೀಯ ಭಾಷಣ ಮಾಡಿದರು. ರೋವರ್ ಸ್ಕೌಟ್ ಲೀಡರ್, ಶ್ರೀ ಮನೋಜ್ ಹಾಗೂ ರೇಂಜರ್ ಲೀಡರ್ ಶ್ರೀಮತಿ ಅಪರ್ಣ ಅಳ್ವ ಉಪಸ್ಥಿತರಿದ್ದರು. ರೋವರ್ ದೀಪಕ್ ಕಾರ್ಯಕ್ರಮ ನಿರ್ವಹಿಸಿದರು.

************

ದಿನಾಂಕ 03-09-2013 ರಂದು ಸರಕಾರಿ ಶಿವರಾಮ ಕಾರಂತ ಪ್ರಥಮ ದರ್ಜೆ ಕಾಲೇಜ್ ಬೆಳ್ಳಾರೆ, ಸುಳ್ಯದಲ್ಲಿ ರೋವರ್ ರೇಂಜರ್ಸ್ ಘಟಕದ ಉದ್ಘಾಟನಾ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಪರಮೇಶ್ವರ್ ರವರು ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ವಾಸುದೇವ ನಡ್ಕ ಉಪಸ್ಥಿತರಿದ್ದು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕಾರ್ಯಕ್ರಮದ ಬಗ್ಗೆ ಮಾಹಿತಿ ನೀಡಿದರು. ಶ್ರೀ ಪ್ರತಿಮ್ ಕುಮಾರ್ ಎಲ್.ಟಿ. ಇವರು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ವೇದಿಕೆಯಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಬಾಲಕೃಷ್ಣ ಭಟ್ ಬಿ. ಇವರು ಅಧ್ಯಕ್ಷೀಯ ಭಾಷಣ ಮಾಡಿದರು.

*************

ದಿನಾಂಕ 12-09-2013 ರಂದು ಕೆನರ ಪ್ರಥಮ ದರ್ಜೆ ಕಾಲೇಜಿನಲ್ಲಿ ರೋವರ್ ರೇಂಜರ್ಸ್ ಘಟಕದ ಉದ್ಘಾಟನಾ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ಪ್ರತೀಮ್ ಕುಮಾರ್ ಎಲ್.ಟಿ., ಇವರು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಸತೀಶ್ ಭಟ್ ಸಂಸ್ಥೆಯ ಬಗ್ಗೆ ಮೆಚ್ಚಿಗೆಯ ನುಡಿಗಳನ್ನಾಡಿದರು. ರೋವರ್ ಸ್ಕೌಟ್ ಲೀಡರ್, ಅವಿನಾಶ್ ಉಪಸ್ಥಿತರಿದ್ದರು.

## ಬಿಜಾಪುರ

ದಿನಾಂಕ : 24-08-2013 ರಂದು ವನಿತಾ ಉತ್ಕರ್ಷ ಮಹಿಳಾ ಮಂಡಳಿ ವಿಜಾಪೂರದಲ್ಲಿ ಶ್ರೀ ವಿಶ್ವೇಶತೀರ್ಥ ಪೇಜಾವರ ಸ್ವಾಮೀಜಿ ಅವರ ಜೊತೆ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಸಂವಾದ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕೇಳಿದ ಹಲವಾರು ಪ್ರಶ್ನೆಗಳಿಗೆ ಶ್ರೀಗಳು ಮಕ್ಕಳ ಮನಸ್ಸಿಗೆ ಮುದ ನೀಡುವ ಹಾಗೆ ಉತ್ತರಿಸಿದರು. ಧರ್ಮ ಮತ್ತು ರಾಷ್ಟ್ರ ಇವೆರಡರಲ್ಲಿ ಯಾವುದು ದೊಡ್ಡದು ಎಂಬ ಪ್ರಶ್ನೆಗೆ ಉತ್ತರ ನೀಡಿದ ಶ್ರೀಗಳು ಇವೆರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಹಾಗೆಯೇ ತಂದೆ ಮತ್ತು ತಾಯಿ ಇವರಲ್ಲಿ ಯಾರು ದೊಡ್ಡವರು ಹೇಳಲು ಆಗದು ಎಂದು ನಾವು ತಿಳಿದುಕೊಳ್ಳಬೇಕಾಗಿದೆ ಎಂದು ಉತ್ತರಿಸಿದರು.

ಹೀಗೆ ಹಲವಾರು ಪ್ರಶ್ನೆಗಳಿಗೆ ನಿರಂತರವಾಗಿ ಎರಡು ಗಂಟೆಯ ವರೆಗೆ ಉತ್ತರಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಸಿದ್ಧಣ್ಣ ಸಕ್ರಿ ಅಧ್ಯಕ್ಷತೆ ವಹಿಸಿದ್ದರು. ಶ್ರೀ ವಾಸುದೇವ ಹೆರಕಲ್, ಮುಖ್ಯ ಅತಿಥಿ ಸ್ಥಾನ ವಹಿಸಿದ್ದರು. ಕಾರ್ಯಕ್ರಮದ ಮೊದಲಿಗೆ ಪ್ರಾಸ್ತಾವಿಕವಾಗಿ ಶ್ರೀ ಪಿ. ಎಸ್. ಕುಂಬಾರ ಮಾತನಾಡಿದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ ನಿರೂಪಿಸಿದರು. ಸುನೀಲ ಬಿರಾದಾರ ಪಾಟೀಲ ವಂದಿಸಿದರು. ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಭಾಗ್ಯಶ್ರಿ ಸಿಂದಗೀಕರ್, ಸ್ಥಾನಿಕ ಆಯುಕ್ತರಾದ ಶ್ರೀ ಸಂಕೇತ ಬಗಲಿ, ಜಿಲ್ಲಾ ಉಪಾಧ್ಯಕ್ಷ ಶ್ರೀ ಪೂಜಪ್ಪ ಪೂಜಾರಿ, ಶ್ರೀಗಳ ಆಶೀರ್ವಚನ ಪಡೆದುಕೊಂಡರು.

## ಉಡುಪಿ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆಯ ವತಿಯಿಂದ ದಿನಾಂಕ : 21-08-2013 ರಿಂದ 27-08-2013 ರ ವರೆಗೆ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಕಾರಂತ ಕಲಾ ಗ್ರಾಮ, ಪ್ರಗತಿ ನಗರ, ಮಣಿಪಾಲ ಇಲ್ಲಿ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್ ಬುಲ್ಸ್ ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು ಸಂಘಟಿಸಲಾಯಿತು ಸ್ಕೌಟ್ಸ್ ಶಿಕ್ಷಕರ ಪ್ರಾಥಮಿಕ ಶಿಬಿರದ ನಾಯಕರಾಗಿ ಶ್ರೀ ಬಿ. ಆನಂದ ಅಡಿಗ, ಎಲ್.ಟಿ.(ಸ್ಕೌಟ್), ಗೈಡ್ ಶಿಬಿರದ ನಾಯಕರಾಗಿ ಕು. ವನಿತಾ ಎಂ. ರಾವ್, ಎ.ಎಲ್.ಟಿ.(ಜಿ.) ಕಬ್ಸ್ ಶಿಕ್ಷಕರ ತರಬೇತಿ ನಾಯಕರಾಗಿ ಶ್ರೀ ಮೋಹನ್ ಕುಮಾರ್ ಎ.ಎಲ್.ಟಿ.(ಕ.), ಬುಲ್ ಬುಲ್ಸ್ ಶಿಕ್ಷಕಿಯರ ತರಬೇತಿ ನಾಯಕರಾಗಿ ಶ್ರೀ ಮೋಹನ್ ಕುಮಾರ್ ಎ.ಎಲ್.ಟಿ.(ಬಿ) ನಾಯಕರಾಗಿ ಕಾರ್ಯ ನಿರ್ವಹಿಸಿದರು. ಸ್ಕೌಟ್ಸ್ ಶಿಕ್ಷಕರ ಪ್ರಾಥಮಿಕ ತರಬೇತಿಗೆ 6 ಶಿಕ್ಷಕಿಯರು ಗೈಡ್ಸ್ ಶಿಕ್ಷಕಿಯರ ತರಬೇತಿಯಲ್ಲಿ 12 ಶಿಕ್ಷಕಿಯರು, ಬುಲ್ ಬುಲ್ಸ್ ಶಿಕ್ಷಕಿಯರ ತರಬೇತಿಯಲ್ಲಿ 10 ಶಿಕ್ಷಕಿಯರು ಭಾಗವಹಿಸಿದ್ದರು.

ಶಿಬಿರ ಸಮಾರೋಪ ಸಮಾರಂಭ ದಿನಾಂಕ 27-08-2013 ರಂದು ಶ್ರೀಮತಿ ಶಾಂತಾ ವಿ. ಆಚಾರ್ಯ, ರಾಜ್ಯ ಆಯುಕ್ತರು (ಗೈಡ್ಸ್) ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ವಸಂತ ಶೆಟ್ಟಿ, ಕ್ಷೇತ್ರ

ಶಿಕ್ಷಣಾಧಿಕಾರಿಗಳು, ಉಡುಪಿ, ಶ್ರೀ ಪಿ.ಆರ್. ನಾಯಕ್ ಮಹಾಪೋಷಕರು, ಜಿಲ್ಲಾ ಸಂಸ್ಥೆ, ಉಡುಪಿ, ಶ್ರೀ ಕೆ.ಬಿ. ರಾವ್ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಡ್ವಿನ್ ಆಳ್ವ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ದಯಾನಂದ ಶೆಟ್ಟಿ ಎ.ಡಿ.ಸಿ.(ಎಸ್) ಶ್ರೀ ಶೇಖರ ಪೂಜಾರಿ ಜಿಲ್ಲಾ ಕಾರ್ಯದರ್ಶಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿ ಸಾವಿತ್ರಿ ಮನೋಹರ್ ಹೆಡ್ ಕ್ವಾಟ್ರರ್ಸ್ ಕಮೀಷನರ್ (ಗೈಡ್ಸ್) ಸ್ವಾಗತಿಸಿದರು. ಶ್ರೀ ಕೊಗ್ಗ ಗಾಣಿಗ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್)ವಂದಿಸಿದರು. ಶ್ರೀ ಎಂ. ಪ್ರಭಾಕರ ಭಟ್ ಎ.ಎಸ್.ಓ.ಸಿ.(ಎಸ್). ಕಾರ್ಯಕ್ರಮ ನಿರೂಪಿಸಿದರು. ಶಿಬಿರ ನಾಯಕರು ತರಬೇತಿ ಉಪಸ್ಥಿತರಿದ್ದರು.

**************

ದಿನಾಂಕ 06–09–2013 ಮತ್ತು 07–09–2013 ರಂದು ಜಿಲ್ಲಾ ಸ್ಕೌಟ್ಸ್ ಗೈಡ್ಸ್ ತರಬೇತಿ ಕೇಂದ್ರ, ಪ್ರಗತಿನಗರ, ಉಡುಪಿ ಇಲ್ಲಿ ಶಾಂತಿನಿಕೇತನ ಆಂಗ್ಲ ಮಾಧ್ಯಮ ಶಾಲೆ, ಅಲೆವೂರು ಇವರ ಆಶ್ರಯದಲ್ಲಿ ಪಟಾಲಂ ನಾಯಕರ ತರಬೇತಿ ಶಿಬಿರವನ್ನು ಸಂಘಟಿಸಲಾಯಿತು. ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಡ್ವಿನ್ ಆಳ್ವ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ವಹಿಸಿದ್ದರು. ಶ್ರೀ ದಿನೇಶ್ ಕಿಣಿ, ಕಾರ್ಯದರ್ಶಿ ಅಲೆವೂರು ಗ್ರೂಪ್ ಆಫ್ ಎಜುಕೇಷನ್ ಶಿಬಿರವನ್ನು ದೀಪ ಬೆಳಗಿಸಿ ಉದ್ಘಾಟಿಸಿದರು. ಶ್ರೀ ಆನಂದ ಅಡಿಗ ಸ್ವಾಗತಿಸಿದರು. ಶ್ರೀ ನಿತಿನ್ ಅಮೀನ್ ಆರ್.ಎಸ್.ಎಲ್. ಇವರು ಧನ್ಯವಾದ ನೀಡಿದರು. ಶಿಬಿರದ ನಾಯಕರಾದ ಶ್ರೀ ಬಿ.ಜಿ. ಬೈಕಾಡಿ ಹೆಚ್.ಡಬ್ಲ್ಯೂ.ಬಿ.(ಎಸ್.) ಶಿಬಿರದ ಮುನ್ನೋಟ ನೀಡಿದರು. ಉಡುಪಿ ಸ್ಥಳೀಯ ಸಂಸ್ಥೆಗೊಳಪಡುವ ವಿವಿಧ ಶಾಖೆಗಳಿಂದ ಸುಮಾರು 80 ವಿದ್ಯಾರ್ಥಿಗಳು ಭಾಗವಹಿಸಿದ್ದರು. ಶಾಂತಿನಿಕೇತನ ಆಂಗ್ಲ ಮಾಧ್ಯಮ ಶಾಲೆಯ ಪ್ರಾಂಶುಪಾಲೆ ರೂಪಾ ಡಿ. ಕಿಣಿ ಕಾರ್ಯಕ್ರಮ ನಿರೂಪಿಸಿದರು.

**********

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕುಂದಾಪುರ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟರ್ಸ್–ಗೈಡರ್ಸ್ ಪುನಶ್ಚೇತನ ತರಬೇತಿ ಶಿಬಿರ ದಿನಾಂಕ 13–09–2013 ರಂದು ಸರಕಾರಿ ಹಿ. ಪ್ರಾ. ಶಾಲೆ ಬೀಜಾಡಿ, ಮೂಡು ಕುಂದಾಪುರ ಇಲ್ಲಿ ಜರುಗಿತು. ಶಿಬಿರವನ್ನು ಉಡುಪಿ ಜಿಲ್ಲಾ ಪಂಚಾಯತ್ ಶಿಕ್ಷಣ ಮತ್ತು ಆರೋಗ್ಯ ಸ್ಥಾನಿ ಸಮಿತಿ ಅಧ್ಯಕ್ಷರಾದ ಶ್ರೀ ಗಣಪತಿ ಶ್ರೀಯಾನ್ ರವರು ಉದ್ಘಾಟಿಸಿದರು. ಶಾಲಾಭಿವೃದ್ಧಿಯ ಸಮಿತಿಯ ಅಧ್ಯಕ್ಷರಾದ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ವಾದಿರಾಜ ಹೆಬ್ಬಾರ್ ರವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀಮತಿ ಗುಣರತ್ನ, ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಕೆ.ಬಿ. ರಾವ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಎಡ್ವಿನ್ ಆಳ್ವ ಸಹಾಯಕ ಉಪಾಧ್ಯಕ್ಷರಾದ ಶ್ರೀ ಕೆ.ಆರ್. ನಾಯಕ್, ಶ್ರೀ ಅಭಿನಂದನ್ ಶೆಟ್ಟಿ ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್ಸ್) ಶ್ರೀ ಕೊಗ್ಗ ಗಾಣಿಗ ಮುಖ್ಯ ಅತಿಥಿಗಳಾಗಿ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಪದ್ಮನಾಭ ಅಡಿಗ ಸ್ಕೌಟ್ಸ್ ಶಿಕ್ಷಕರ ಮುಖ್ಯೋಪಾಧ್ಯಾಯರು ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಆನಂದ ಪೂಜಾರಿ ಧನ್ಯವಾದ ನೀಡಿದರು. ಶ್ರೀ ಆನಂದ ಅಡಿಗ ಪ್ರಾಸ್ತಾವಿಕ ಮಾತುಗಳನ್ನಾಡಿದರು. ಜಿಲ್ಲಾ ಸಂಸ್ಥೆಯ ಚಟುವಟಿಕೆಗಳ ಶಾಶ್ವತ ನಿಧಿ ಕೂಪನ್ ಬಿಡುಗಡೆ ಅಮಾರಂಭ ಅದೇ ಸಂದರ್ಭದಲ್ಲಿ ನಡೆಯಿತು.

ಜಿಲ್ಲಾ ಮುಖ್ಯ ಆಯುಕ್ತರು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಿಗೆ ಕೂಪನ್‌ಗಳನ್ನು ಹಸ್ತಾಂತರಿಸಿದರು. ಸ್ಥಾಯಿ ಸಮಿತಿ ಅಧ್ಯಕ್ಷರು ಕೂಪನ್ ಪುಸ್ತಕ ಬಿಡುಗಡೆ ಮಾಡಿ ಧನ ಸಹಾಯವನ್ನು ನೀಡಿದರು.

## Bangalore North

The Badge work Camp was organised by Shivajinagar Local Association on 24th to 25th August 2013 at St. Anthony's Boy's High School, Bangalore.

156 Cubs-Bul buls, Scouts-Guides, participated in the camp. The Leaders of the Camp was Mrs. Rajamma Flock Leader Mary's Public School, Miss. Carvnia Bathmaja ALT(G) Goodwill Girls High School & Mr. Karthik Scout Master from 15th Kanteerava Open Unit.

The Camp Inaugurated by Rev.Fr. Anthonyswamy, Principal and Vice-President, S.L.A. Rev. Fr. Pradeep co-ordinator Sr. Jessie were Present. Smt. Ramalatha J.S.S.(G) was the Chief Guest for the valedictory Function.

The Programme was co-ordinated by Mrs. B. Revathy, LT.(B), and Miss. Krupa Vijay Secretary Shivajinagar Local Association

## ಅಭಿನಂದನೆಗಳು



**ಶ್ರೀಮತಿ ಎಂ. ವಿ. ಕುಸುಮಾ,** ಕಬ್ ಮಾಸ್ಟರ್ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಸಿದ್ಧರ ಹಳ್ಳಿ ಅರಸೀಕೆರೆ ತಾಲ್ಲೂಕು ಹಾಸನ ಜಿಲ್ಲೆ ಇವರು 2013-14ನೇ ಸಾಲಿನ ರಾಜ್ಯದ **"ಉತ್ತಮ ಶಿಕ್ಷಕಿ ಪ್ರಶಸ್ತಿ"** ಪಡೆದಿರುತ್ತಾರೆ.



**ಶ್ರೀ ನಾಗೇಶ ಗೌಡ** ಹೆಚ್.ಡಬ್ಲ್ಯೂ.ಬಿ. (ಎಸ್.) ಸ್ಕೌಟ್ ಮಾಸ್ಟರ್, ಸರಕಾರಿ ಪ್ರೌಢಶಾಲೆ ಕಲ್ಲೂರು ತಾಲ್ಲೂಕು ಮಾನವಿ, ಜಿಲ್ಲೆ ರಾಯಚೂರು ಇವರು 2013-14ನೇ ಸಾಲಿನ ಜಿಲ್ಲಾ ಮಟ್ಟದ **"ಉತ್ತಮ ಶಿಕ್ಷಕ ಪ್ರಶಸ್ತಿ"** ಪಡೆದಿರುತ್ತಾರೆ.

***"A teacher in the person who taken the responsibility of shaping and grooming individual for their better tomorrow and feels proud when these individuals become achievers. All this without any expectation only second to the parents."***

...............ಹಿಂದಿನ ಸಂಚಿಕೆಯಿಂದ

## ಅಧ್ಯಾಯ – 3 ಕಾರ್ಯಸರಣಿ ಶಿಬಿರಾಗ್ನಿ ಉದಂತ ಸಂ – 9

# ಶಿಬಿರ ಕೌಶಲ್ಯ
# (CAMP CRAFT)

## ಶಿಬಿರದಲ್ಲಿ ಸೌಖ್ಯ – ಆವರಣ – ಶಿಬಿರ ಸರಂಜಾಮು – ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು – ಶಿಬಿರವನ್ನು ಚೊಕ್ಕಟವಾಗಿಡುವುದು

### ಬೆಂಕಿಯನ್ನು ಹೊತ್ತಿಸಲು ಜೋಡಣೆ

ಹೇಗೆ ಜೋಡಿಸಬೇಕೆಂದು ಸುಮ್ಮನೆ ಹೇಳಿದರೆ ಪ್ರಯೋಜನವಿಲ್ಲ. ನಿಮಗೆ ನೀಡಿರುವ ತಿಳುವಳಿಕೆಯನ್ನು ಗಮನದಲ್ಲಿಟ್ಟುಕೊಂಡು, ನಿಮಗೆ ನೀವೇ ಜೋಡಿಸುವುದು ಮತ್ತು ಹೊತ್ತಿಸುವುದನ್ನು, ಅಭ್ಯಾಸ ಮಾಡಿಕೊಳ್ಳಬೇಕು.

'ಟೂ ಲಿಟಲ್ ಸ್ಯಾವೇಜಸ್' (Two little savages) ಎಂಬ ಪುಸ್ತಕದಲ್ಲಿ, ಕಟ್ಟಿಗೆಗಳನ್ನು ಜೋಡಿಸುವ ಬಗ್ಗೆ ಈ ಕೆಳಗಿನ ಪದ್ಯವನ್ನು ಕೊಟ್ಟಿದೆ.

"First a curl of birch as dry as it can be,"
Then some twigs of soft wood, dead
from off a tree;
Last of all some pince knots,
to make a kettle foam,
And there is a fire, to make you think,
you are sitting right at hone,

ಮೊದಲು ಕಡ್ಡಿ, ಪುರಲೆ ಪೂರಾ ಒಣಗಿರುವುದೂ,
ಅದರ ಮೇಲೆ ರೆಂಬೆಕೊಂಬೆ ಒಣಗಿ ಕಡಿದುದೂ,
ಇದಾಗಿ ಕೊನೆಗೆ ಮರದ ತುಂಡು ತಡೆದು
ಉರಿಯಲೂ
ಇದೇ ಬೆಂಕಿ, ನೆನೆದು ನೋಡು, ಮನೆಯ
ನೆನಪು ತರುವುದೂ.

ಸಾಮಾನ್ಯವಾಗಿ, ಹೊಸಬರು ಮಾಡುವ ತಪ್ಪೆಂದರೆ, ಮೊದಲಿನಲ್ಲಿಯೇ, ದೊಡ್ಡದಾದ, ಬೆಂಕಿಯನ್ನು ಉರಿಸಲು ಪ್ರಯತ್ನಿಸುವುದು. ಕಗ್ಗಾಡು ಜನರು ಎಂದಿಗೂ ಹಾಗೆ ಮಾಡುವುದಿಲ್ಲ. ಬಹಳ ಸ್ವಲ್ಪ ಕಟ್ಟಿಗೆಯನ್ನು ಉಪಯೋಗಿಸಿ, ಬೆಂಕಿಯನ್ನು ಮಾಡುತ್ತಾರೆ.



*ಈ ರೀತಿ ಜೋಡಿಸುವುದರಿಂದ, ಬೆಂಕಿಯನ್ನು ಹೊತ್ತಿಸಲು ಒಂದು ಬೆಂಕಿಕಡ್ಡಿಯೇ ಸಾಕು.*

ಸೌದೆ, ಕಟ್ಟಿಗೆಗಳನ್ನು, ಮೊದಲು ಜಮಾಯಿಸಿ. ಆಗ ತಾನೆ ಕಡಿದ ಹಸಿಯ ಸೌದೆಯೂ, ನೆಲದ ಮೇಲೆ ಬಿದ್ದು ಬೆಂಡು ಬಂದ ಸೌದೆಯೂ ಉಪಯೋಗಕ್ಕೆ ಬರುವುದಿಲ್ಲ. ಮರಗಳಲ್ಲಿ ಒಣಗಿನಿಂತ ಕೊಂಬೆಗಳನ್ನು ಕತ್ತರಿಸಿಕೊಳ್ಳಲು, ಅನುಮತಿ ಪಡೆಯಿರಿ.

ನೆಲದ ಮೇಲೆ, ಮೊದಲಿಗೆ ಸಣ್ಣಪುಟ್ಟ ಪುರಲೆ, ಕಡ್ಡಿಗಳನ್ನು ಹರಡಿ, (ನೆಲವು ತೇವದಿಂದ ಕೂಡಿದ್ದರೆ, ಈ ರೀತಿ ಜೋಡಿಸುವುದು ವಿಶೇಷತಃ ಅವಶ್ಯಕವಾಗುತ್ತದೆ). ಇದರ ಮೇಲೆ ಚಿಕ್ಕಪುಡಿ (punkh) ಯನ್ನು ಎಂದರೆ ಹೆರೆದ ಅಥವಾ ಜವಿದ, ತೆಳುವು ಹಾಳೆಯಂತಿರುವ, ಮರದ ಚೂರುಗಳನ್ನೂ ಮತ್ತು ಇತರ ಸಣ್ಣ ಸಣ್ಣ ಸೌದೆ ಕಡ್ಡಿಗಳನ್ನೂ ಹಾಗೂ ಸಿಬಿರಿರುವ ಸೌದೆಯನ್ನೂ ಜೋಡಿಸಿ, ಇವೆಲ್ಲವೂ ಕಡ್ಡಿಗೀರುತ್ತಿದ್ದಂತೆಯೇ ಹತ್ತಿಕೊಳ್ಳುತ್ತವೆ.

ಈಗ ಚಕ್ಕೆಪುಡಿಗೆ ಆನಿಸಿ, ಪರಸ್ಪರ ಒರಗುವಂತೆ, ಪಿರಮಿಡ್‌ನ ಆಕಾರದಲ್ಲಿ, ಸಣ್ಣ ಸಣ್ಣ ರೆಂಬೆಗಳನ್ನೂ, ಸಿಬಿರಿನಿಂದ ಕೂಡಿದ ಸೌದೆಯನ್ನೂ, ಸೌದೆಯ ಸೀಳುಗಳನ್ನೂ ಜೋಡಿಸಿ. ಇದನ್ನು "ಜ್ವಲಕ" (Kindling) ಎಂದು ಕರೆಯುತ್ತಾರೆ.

ಸೌದೆಯನ್ನು ಸಣ್ಣದಾಗಿ, ಸಿಬಿರಿರುವಂತೆ ಸೀಳಿಕೊಳ್ಳುವುದರಿಂದ, ಒಳ್ಳೆಯ ಜ್ವಲಕವು ದೊರೆಯುತ್ತದೆ. ಕೆಳಗೆ, ಒಳಗೆ ಎಕ್ಕೆ ಪುಡಿ, ಮೇಲೆ ಸೌದೆ ಸೀಳುಗಳು ಹೀಗೆ ಜೋಡಿಸಿ, ಹೊತ್ತಿಸಿದರೆ, ಕೂಡಲೇ ಭಗ್ಗೆಂದು ಹತ್ತಿ ಉರಿಯುತ್ತದೆ.

ಪೂರಾ ಹತ್ತಿಕೊಂಡು ಉರಿಯಲಾರಂಭಿಸಿದ ಮೇಲೆ, ಸ್ವಲ್ಪ ದಪ್ಪನೆಯ ಸೌದೆಯನ್ನು ಇಡಬಹುದು.



*ಟಾಮಿ : ಕೋಮಲ ಪಾದ ನಂ. 6 : ಟಾಮಿಯು ಬಲೆಯನ್ನು ಜೋಡಿಸುತ್ತಾನೆ.*
*ಬೆಂಕಿಯನ್ನು ಹೊತ್ತಿಸಲು ಎಲ್ಲರಿಗೂ ಸರಿಪಡಿಸಿ ಸಹಾಯ ಮಾಡುತ್ತಾನೆ.*
*ಆದರವನು ಜೋಡಿಸಿದ ಪುಟ್ಟ ಒಲೆ ಉರಿಯದೇ ಸುಮ್ಮನಿತ್ತು ತನ್ನ ತಾನೆ.*

..........ಮುಂದುವರೆಯುತ್ತದೆ

# Gone Home



**Mr. Vishwanath Kakade,** H.W.B(S) passed away on 24th August 2013.

He was Presently the Joint Secretary (Scouts) of Shivajinagar Local Association.

He was a formerly Secretary, L.A., Ulsoor in Bangalore South District.

He was a Life Member of St.John's Ambulance Association.

He worked as an Assistant Executive Engineer. He leaves behind his Wife, two Sons a Grand daughter and a Grand son.

The Movement was lost a sincere Scouter.

We Pray God to give Strength to the bereaved family to bear the Loss.

***MAY HIS SOUL REST IN PEACE.***

---

**Sri V.R.Kulkarni,** H.W.B(S), Passed away on 22.08.2013.

He was a Teacher and Scout Master in Bishop Cotton Boys High School, Bangalore and the Secretary for Bangalore North District.

The Movement has lost a sincere Scouter. We Pray God to give Strength to the berieved family to bear the Loss.

***MAY HIS SOUL REST IN PEACE.***

***State Secretary***

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227



**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



A life of joy and happiness is possible only on the basis of Knowledge and Science.

***Dr. S. Radhakrishnan***






ದಿನಾಂಕ 13.09.2013ರಿಂದ 15.09.2013ರವರೆಗೆ ಹಾಸನ ಜಿಲಾ ಸ್ಕೌಟ್ ಭವನದಲ್ಲಿ ಜರುಗಿದ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್‌ಗಳ ಪ್ರವೀಣ್ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್ ಹಾಗೂ ರೇಂಜರ್ಸ್‌ಗಳು, ಸಿಬ್ಬಂದಿ ವರ್ಗ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ದಿನಾಂಕ 22.08.2013ರಂದು ಕಾರವಾರ ಜಿಲ್ಲೆ ಹೊನ್ನಾವರದ ಮಾರ್ಥೋಮಾ ಶಾಲೆಯಲ್ಲಿ ಜರುಗಿದ "ಪರಿಸರ ದಿನಾಚರಣೆ" ಹಾಗೂ 2013-14ನೇ ಸಾಲಿನ ಕಾರ್ಯಚಟುವಟಿಕೆಗಳ ಉದ್ಘಾಟನೆಯನ್ನು ಶಾಲೆಯ ಖಜಾಂಚಿ ಶ್ರೀ ಕೆ.ಸಿ.ವರ್ಗೀಸ್, ನೆರವೇರಿಸಿದರು. ಫಾದರ್ ಜೋಜಿ ಥಾಮಸ್, ಶ್ರೀಮತಿ ಮಿನೀಮಿಸ್, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡಿಸ್ ಇತರರು ಚಿತ್ರದಲ್ಲಿದ್ದಾರೆ..



ದಿನಾಂಕ 24.08.2013ರಂದು ಬೆಳಗಾವಿ ಜಿಲ್ಲಾ ಸ್ಕೌಟ್ ಭವನದಲ್ಲಿ ಜರುಗಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದಲ್ಲಿ ಭಾಗವಹಿಸಿದ್ದ ಶ್ರೀ ವಿ.ಪಿ.ಕಾಂಬಳೆ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಮಾತನಾಡುತ್ತಿರುವುದು. ಶ್ರೀ ಎಸ್.ಎ.ನದಾಪ, ಶ್ರೀ ಎಂ.ಎಂ. ಸಜ್ಜನ, ಶ್ರೀ ನಾಗೇಶ್ ಶಿವಪುರ, ಶ್ರೀ ಡಿ.ಬಿ. ಅತ್ತರ್ ಚಿತ್ರದಲ್ಲಿದ್ದಾರೆ.




ದಿನಾಂಕ 16-08-2013 ರಂದು ಶಿವಮೊಗ್ಗ ಜಿಲ್ಲೆ, ಭದ್ರಾವತಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಜರುಗಿದ ರೋವರಿಂಗ್-ರೇಂಜರಿಂಗ್ ಮಾಹಿತಿ ಶಿಬಿರದಲ್ಲಿ ಶ್ರೀ ಎಂ. ಚಂದ್ರಪ್ಪ, ಪ್ರಾಂಶುಪಾಲರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ವಾಸ್ಯನಾಯ್ಕ, ರೋವರ್ ಲೀಡರ್, ಶ್ರೀಮತಿ ನಿವೇದಿತಾ, ರೇಂಜರ್ ಲೀಡರ್‌ಚಿತ್ರದಲ್ಲಿದ್ದಾರೆ.



ದಿನಾಂಕ 14ರಿಂದ 15 ಸೆಪ್ಟೆಂಬರ್ 2013ರವರೆಗೆ ಕೋಲಾರ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಜರುಗಿದ ದ್ವಿತೀಯ ಸೋಪಾನ ಹಾಗೂ ದ್ವಿತೀಯ ಚರಣ್ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳು ಚಿತ್ರದಲ್ಲಿದ್ದಾರೆ.

Regd. as News Paper (Magazine) RNI No : 13348/1959. Postal Regd. No KA/BGW-549/2012-201
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28, 30 Every Month (No. of Pages : 4 + 24 = 28)





ದಿನಾಂಕ 26ರಿಂದ 30 ಆಗಸ್ಟ್ 2013ರವರೆಗೆ ಕೊಂಡಜ್ಜಿ ರಾಜ್ಯ ತರಬೇತಿ ಕೇಂದ್ರದಲ್ಲಿ ನಡೆದ ರಾಜ್ಯ ಮಟ್ಟದ ರೋವರ್ಸ್‌ಗಳ ಸಮುದಾಯ ಸೇವಾ ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್‌ಗಳು ಸ್ವಚ್ಛತಾ ಕಾರ್ಯದಲ್ಲಿ ತೊಡಗಿರುವುದು.



ದಿನಾಂಕ 17.09.2013ರಂದು ರಾಯಚೂರು ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ "ಹೈದ್ರಾಬಾದ್ ಕರ್ನಾಟಕ ವಿಮೋಚನಾ ದಿನಾಚರಣೆ" ಅಂಗವಾಗಿ ಸಾಮೂಹಿಕ ಪಥಚಲನದಲ್ಲಿ ಭಾಗವಹಿಸಿದ ಗೈಡ್ಸ್ ತಂಡ



ದಿನಾಂಕ 04.09.2013ರಂದು ಕೊಪ್ಪಳದ ಸರಸ್ವತಿ ವಿದ್ಯಾಮಂದಿರ ಶಾಲೆಯಲ್ಲಿ ಏರ್ಪಡಿಸಿದ್ದ ಚಿತ್ರಕಲಾ ಸ್ಪರ್ಧೆಯಲ್ಲಿ ಭಾಗವಹಿಸಿರುವ ಗೈಡ್ಸ್‌ಗಳು



ದಿನಾಂಕ 12.09.2013ರಂದು ರಾಯಚೂರು ಜಿಲ್ಲೆಯ ಕೆ.ಪಿ.ಸಿ.ಎಲ್.ಡಿ.ಎ.ವ್ಹಿ. ಪಬ್ಲಿಕ್ ಶಾಲೆ, ಶಕ್ತಿ ನಗರ, ಶಾಲೆಯ ಸ್ಕೌಟ್ಸ್‌ಗಳು ಹೊರಸಂಚಾರಕ್ಕಾಗಿ ತೆರಳುತ್ತಿರುವ ದೃಶ್ಯ.



ದಿನಾಂಕ 31.08.2013ರಿಂದ 02.09.2013ರವರೆಗೆ ಮಂಗಳೂರಿನ ಪಿಳಿಕುಳದಲ್ಲಿ ನಡೆದ ಕಾರ್ಯಕ್ರಮದಲ್ಲಿ ರೋವರ್ಸ್ ರೇಂಜರ್ಸ್‌ಗಳು ಭಾಗವಹಿಸಿದರು.



SCOUTS
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore - 560 026**